

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿಗಾಗಿ ಸಾದರ ಪಡಿಸಿದ
ಸಂಶೋಧನಾ ಸಂಪ್ರಬಂಧ

# ಹೆಣ್ಣಿನ ಭಾಷೆ ಮತ್ತು ಸಾಮಾಜಿಕತೆ

**ಚಂದ್ರಕಲಾ.ಜಿ.**
ಸಂಶೋಧನಾ ವಿದ್ಯಾರ್ಥಿನಿ
ನೋಂದಣಿ ಸಂಖ್ಯೆ : KVMBKS-00335



ಮಾರ್ಗದರ್ಶಕರು
**ಡಾ.ರಾಮಲಿಂಗಪ್ಪ.ಟಿ.ಬೇಗೂರು**
ಪ್ರಾಧ್ಯಾಪಕರು
ಮಹಾರಾಣಿ ಮಹಿಳಾ ಕಲಾ ಕಾಲೇಜು
ಶೇಷಾದ್ರಿರಸ್ತೆ, ಬೆಂಗಳೂರು-01




**ಕಾವ್ಯಮಂಡಲ**
ನಂ. 13/85, ರಾಷ್ಟ್ರೀಯ ವಿದ್ಯಾಲಯ ರಸ್ತೆ,
ಬಸವನಗುಡಿ, ಬೆಂಗಳೂರು-560004

**2009**

795

# ದೃಢೀಕರಣ ಪತ್ರ

**ಚಂದ್ರಕಲಾ.ಜಿ.** ರವರು ಎಂ.ಫಿಲ್. ಪದವಿಗಾಗಿ ಬರೆದು ಸಿದ್ಧಪಡಿಸಿರುವ **ಹೆಣ್ಣಿನ ಭಾಷೆ ಮತ್ತು ಸಾಮಾಜಿಕತೆ** ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

26/09

ಮಾರ್ಗದರ್ಶಕರು

**ಡಾ.ರಾಮಲಿಂಗಪ್ಪ.ಟಿ.ಬೇಗೂರು**

ಪ್ರಾಧ್ಯಾಪಕರು

ಮಹಾರಾಣಿ ಮಹಿಳಾ ಕಲಾ ಕಾಲೇಜು

ಶೇಷಾದ್ರಿರಸ್ತೆ, ಬೆಂಗಳೂರು-01

ಮಹಾರಾಣಿ ಮಹಿಳಾ ಕಲಾ, ವಾಣಿಜ್ಯ ಮತ್ತು ನಿರ್ವಹಣೆ ಮಹಾವಿದ್ಯಾಲಯ, ಬೆಂಗಳೂರು-1.

ಸ್ಥಳ : ಬೆಂಗಳೂರು

ದಿನಾಂಕ : 26.09.2009

795

# ಪ್ರಮಾಣ ಪತ್ರ

**ಹೆಣ್ಣಿನ ಭಾಷೆ ಮತ್ತು ಸಾಮಾಜಿಕತೆ** ಎಂಬ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ಹಂಪಿ ಕನ್ನಡವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು **ಡಾ.ರಾಮಲಿಂಗಪ್ಪ ಟಿ. ಬೇಗೂರು** ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧದ ವಿಷಯವಾಗಿ ಇದುವರೆವಿಗೂ ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಚಂದ್ರಕಲಾ ಜಿ

**ಚಂದ್ರಕಲಾ.ಜಿ.**
ಸಂಶೋಧನಾ ವಿದ್ಯಾರ್ಥಿನಿ

ಸ್ಥಳ : ಬೆಂಗಳೂರು
ದಿನಾಂಕ : 26.09.2009

# ಪರಿವಿಡಿ

# ಅಧ್ಯಾಯ - ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಒಂದು ಸಮುದಾಯದ ಸಾಂಸ್ಕೃತಿಕ ವಾಹಕವಾಗಿ 'ಭಾಷೆ' ನಿರ್ವಹಿಸುವ ಪಾತ್ರ ಬಹಳ ಮಹತ್ವವಾದದ್ದು. ಆ ಸಮುದಾಯ ಪ್ರತಿಪಾದಿಸುವ ಸಾಮಾಜಿಕ ಮೌಲ್ಯಗಳು ಭಾಷೆಯೊಳಗೆ ಸದಾ ಪ್ರತಿಫಲನಗೊಳ್ಳುತ್ತಲೇ ಇರುತ್ತವೆ. ಜನರ ಐಡಿಯಾಲಜಿಗಳ ಮೂರ್ತರೂಪವೇ ಭಾಷೆ ಎಂದರೆ ಕೂಡ ತಪ್ಪಾಗಲಾರದು. ಭಾಷೆ ಸಂವಹನಕ್ಕಾಗಿ ಮಾತ್ರ ರೂಪುಗೊಂಡರೂ ಕೂಡ ಅದರ ಹಿಂದಿರುವ ಗ್ರಹಿಕೆ ಆ ಸಮುದಾಯ ಪ್ರತಿಪಾದಿಸುವ ತಾತ್ವಿಕತೆಗೆ ಅನುಗುಣವಾಗಿ ವ್ಯಕ್ತಿಗಳ ನಡುವೆ ಸದಾ ಆವರ್ತನಗೊಳ್ಳುತ್ತಲೇ ಇರುತ್ತದೆ.

ಮನುಷ್ಯರ ಪ್ರತಿಯೊಂದು ಆಲೋಚನೆ, ಗ್ರಹಿಕೆಗಳು ಸದಾ ಪ್ರಧಾನ/ ಅಧೀನ ಎಂಬುದರ ಮೂಲಕವೇ ಸಾಕಾರಗೊಳ್ಳುತ್ತಿರುತ್ತವೆ. ಈ ದ್ವಿಮಾನದ ಕಲ್ಪನೆ ಇಲ್ಲದೆ ಯಾವುದೇ ಚರ್ಚೆ, ತತ್ವ, ತರ್ಕಗಳ ಉಗಮ ಕೂಡ ಸಾಧ್ಯವಾಗುವುದಿಲ್ಲ ಎಂದು ಹೇಳಬಹುದು. ಸಮಾಜದಲ್ಲಿ ಗಂಡು/ಹೆಣ್ಣುಗಳ ಸ್ವಭಾವಗಳ ವಿಂಗಡಣೆಯಾದಂತೆ ಭಾಷೆಯಲ್ಲೂ ಕೂಡ ಈ ದ್ವಿಮಾನದ ಕಲ್ಪನೆ ನೆಲೆಮಾಡಿಕೊಂಡಿದೆ ಎಂಬುದು ನಮ್ಮ ಅನೇಕ ಭಾಷಾ ಶಾಸ್ತ್ರಜ್ಞರ ಹಾಗೂ ಸ್ತ್ರೀವಾದಿಗಳ ವಾದ. ಈ ವಾದ ಹೌದೇ ? ಅಲ್ಲವೇ? ಭಾಷೆಯಲ್ಲಿ ನಿಜವಾಗಿಯು 'ಗಂಡುತನ' ಮತ್ತು 'ಹೆಣ್ಣುತನ' ಎಂಬ ಕಲ್ಪನೆ ನೆಲೆಮಾಡಿಕೊಂಡಿವೆಯೆ? ಹಾಗಾದರೆ ಭಾಷೆಯಲ್ಲಿ 'ಗಂಡು ಭಾಷೆ' 'ಹೆಣ್ಣು ಭಾಷೆ' ಎಂಬ ಎರಡು ಪ್ರತ್ಯೇಕ ಭಾಷಾ ವಿಭಾಗಗಳಿವೆಯೇ? ಎಂಬ ಪ್ರಶ್ನೆಗಳ ಮುಖಾಂತರ **'ಹೆಣ್ಣಿನ ಭಾಷೆ ಮತ್ತು ಸಾಮಾಜಿಕತೆ'** ಎಂಬ ಶೀರ್ಷಿಕೆಯಡಿಯಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಈ ಮೇಲಿನ ಪ್ರಶ್ನೆಗಳ ಜೊತೆಗೆ ಇನ್ನೂ ಕೆಲವು ಅಂಶಗಳನ್ನು ಗಮನದಲ್ಲಿರಿಸಿಕೊಂಡು ವಿಶ್ಲೇಷಣೆಗೆ ಒಳಪಡಿಸುವುದು ಈ ಅಧ್ಯಯನದ ಬಹಳ ಮುಖ್ಯವಾದ ಉದ್ದೇಶವಾಗಿದೆ. ಆ ಕೆಲವು ಪ್ರಶ್ನೆಗಳು ಯಾವುದೆಂದರೆ,

- ಭಾಷೆಯಲ್ಲಿ ಗಂಡು/ಹೆಣ್ಣು ಎಂಬ ಎರಡು ವಿಧಗಳಿವೆಯೇ ? ಅಥವಾ ಎರಡು ದೃಷ್ಟಿಕೋನಗಳಿವೆಯೇ ?
- ಭಾಷೆಯನ್ನು 'ಗಂಡುಭಾಷೆ' ಮತ್ತು 'ಹೆಣ್ಣುಭಾಷೆ' ಎಂದು ವಿಭಾಗಿಸಿ ನೋಡುವ ಕ್ರಮ ಸೂಕ್ತವೇ ?
- ಭಾಷೆಯ ಸಂರಚಿತ ರೂಪವೇ ಗಂಡು/ಹೆಣ್ಣು ಎಂಬ ತಾರತಮ್ಯದಿಂದ ಕೂಡಿದೆಯೇ ? ಅಥವಾ ಸಮುದಾಯದ ಸುಪ್ತ ಚೇತನಗಳ ಸಂಜ್ಞೆಗಳಾಗಿ ಭಾಷೆಯಲ್ಲಿ ಅಂತಸ್ಥಗೊಂಡು ವಿಭಜಿತ ನೆಲೆಗೆ ಬಂದು ನಿಂತಿವೆಯೇ ?
- ಮಹಿಳೆಯರದೇ ಹೊಸ ಭಾಷೆ ಸೃಷ್ಟಿಸಲು ಸಾಧ್ಯವಾಗಿದೆಯೇ ?
- ಮಹಿಳೆಯರದೇ ಪ್ರತ್ಯೇಕ ಭಾಷೆ ಸೃಷ್ಟಿಯಾದ ಮೇಲೆ ಅದು ಅಪ್ರಜ್ಞಾಪೂರ್ವಕವಾಗಿ ಆ ಇಡೀ ಸಮುದಾಯದ ಸಾಂಸ್ಕೃತಿಕ ಭಾಗವಾಗಿ ಬಳಕೆಯಾಗುವಷ್ಟು ಪ್ರಭಾವಯುತವಾಗಿದೆಯೇ ? ಅಥವಾ ಕೇವಲ ಪ್ರಜ್ಞಾಪೂರ್ವಕ ನೆಲೆಯಲ್ಲಿ ಮಾತ್ರ ನಿಂತುಬಿಟ್ಟಿದೆಯೇ ?
- ಲಿಂಗಾತೀತವಾದ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗಿದೆಯೇ ?
- ಗಂಡು-ಹೆಣ್ಣಿನ ಆಲೋಚನೆ, ಲೋಕಗ್ರಹಿಕೆ ಮತ್ತು ತಾತ್ವಿಕತೆ ಭಿನ್ನವೇ? ಹೌದಾದರೆ ಅದಕ್ಕೆ ಕಾರಣಗಳೇನು ?
- ಗಂಡು-ಹೆಣ್ಣಿನ ವಿಚಾರಗಳ ಭಿನ್ನತೆಗೆ ಅವರ ದೈಹಿಕ ಲಕ್ಷಣಗಳ ಭಿನ್ನತೆ ಏನಾದರೂ ಕಾರಣವಾಗಿದೆಯೇ ?

ಈ ಮೇಲಿನ ಅಂಶಗಳನ್ನು ಸ್ಪಷ್ಟಪಡಿಸಿಕೊಳ್ಳಲು ಪ್ರಸ್ತುತ ಸಾಮಾಜಿಕ ಸಂದರ್ಭದಲ್ಲಿ ಬಳಕೆಯಾಗುತ್ತಿರುವ ಭಾಷೆಯ ಮಾಹಿತಿ ಸಂಗ್ರಹಣೆ ಹಾಗೂ ಭಾಷೆಯ ಸೃಜನಶೀಲ ಸೃಷ್ಟಿಯಾದ ಸಾಹಿತ್ಯ ಕೃತಿಗಳಲ್ಲಿನ ಹೆಣ್ಣಿನ ಭಾಷಾ ಬಳಕೆಯ ನೆಲೆಗಳನ್ನು ಗುರುತಿಸುವಿಕೆಯನ್ನು ಈ ಅಧ್ಯಯನ ಒಳಗೊಂಡಿರುತ್ತದೆ.

**ಅಧ್ಯಯನದ ವಿಧಾನಗಳು**

ಈ ಅಧ್ಯಯನವು ಕೆಳಕಂಡ ಅಧ್ಯಯನ ವಿಧಾನಗಳನ್ನು ಅಳವಡಿಸಿಕೊಂಡಿದೆ. ಅವುಗಳೆಂದರೆ,

೧. ಭಾಷಾ ರಚನೆಯ ವಿಶ್ಲೇಷಣೆ

೨. ಸಾಹಿತ್ಯ ಕೃತಿಗಳ ವಿಶ್ಲೇಷಣೆ

೩. ಮಾಹಿತಿ ಸಂಗ್ರಹಣೆ ಮತ್ತು ವಿಶ್ಲೇಷಣೆ

**ಅಧ್ಯಯನದ ಹಂತಗಳು**

ಅಧ್ಯಯನದ ಅನುಕೂಲತೆಗಾಗಿ ಕೆಲವೊಂದು ಹಂತಗಳನ್ನು ವಿಭಾಗಿಸಿ ಕೊಳ್ಳಲಾಗಿದೆ. ಅವುಗಳೆಂದರೆ,

೧. ಭಾಷೆ ಮತ್ತು ಲಿಂಗಭೇದ

೨. ಜ್ಞಾನಕ್ಕಾವಲಿಂಗ

೩. ಸಾಹಿತ್ಯ ಕೃತಿಗಳಲ್ಲಿನ ಹೆಣ್ಣಿನ ಭಾಷಿಕ ನೆಲೆ

೪. ಮಾಹಿತಿ ಸಂಗ್ರಹಣೆ ಮತ್ತು ವಿಶ್ಲೇಷಣೆ

೫. ಸಮಾರೋಪ

**೧. ಭಾಷೆ ಮತ್ತು ಲಿಂಗಭೇದ**

ಈ ಅಧ್ಯಾಯದಲ್ಲಿ ಭಾಷೆ ಒಳಗೊಂಡಿರುವ ಲಿಂಗತಾರತಮ್ಯದ ಸ್ವರೂಪದ ಚರ್ಚೆ ಹಾಗೂ ಭಾಷೆಯಲ್ಲಿನ ಲಿಂಗತಾರತಮ್ಯವನ್ನು ಕುರಿತು ಇಲ್ಲಿಯವರೆಗೂ ಚರ್ಚಿತವಾದ ಡೇಲಿಸ್ಪೆಂಡರ್, ಜೂಲಿಯಾ ಕ್ರಿಸ್ಟೇವಾ, ಲೆಕಾನ್, ಫ್ರಾಯ್ಡ್, ಮೇರಿಡೇಲಿ ಮೊದಲಾದ ಚಿಂತಕ/ಚಿಂತಕಿಯರ ವಿಚಾರಗಳನ್ನು ವಿಶ್ಲೇಷಣೆಗೆ ಒಳಪಡಿಸಿಕೊಳ್ಳಲಾಗಿದೆ. ಈ ವಿಚಾರಗಳ ವಿಶ್ಲೇಷಣೆಗೆ ಅನುಕೂಲವಾಗುವಂತೆ ಕೆಲವು ಉಪವಿಭಾಗಗಳನ್ನು ಕೂಡ ವಿಂಗಡಿಸಿಕೊಳ್ಳಲಾಗಿದೆ. ಅವುಗಳೆಂದರೆ

೧. ಭಾಷಿಕ ರಚನೆ ಮತ್ತು ವ್ಯವಸ್ಥೆ

೨. ಭಾಷೆಯಲ್ಲಿನ ದ್ವಿಮಾನದ ಕಲ್ಪನೆ ಪ್ರಾರಂಭವಾಗುವುದು ಹೇಗೆ ? ಮತ್ತು ಯಾವಾಗ ?

ಎ) ಭಾಷಾ ಪೂರ್ವಸ್ಥಿತಿ

ಬಿ) ಭಾಷಿಕ ಸ್ಥಿತಿ

೩. ಪುಲ್ಲಿಂಗಾಂಕಿತಗಳು ಮತ್ತು ಸ್ತ್ರೀಲಿಂಗಾಂಕಿತಗಳು

೪. ಮಹಿಳೆಯರದೇ ಆದ ಹೊಸ ಭಾಷೆ ಸೃಷ್ಟಿಸಲು ಸಾಧ್ಯವಾಗಿದೆಯೇ ?

೫. ಲಿಂಗಾತೀತವಾದ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗಿದೆಯೇ ?

೬. ಭಾಷೆ ಎಂಬ ಸಾಮರ್ಥ್ಯ ಪಡೆದುಕೊಳ್ಳುವಿಕೆ ಮತ್ತು ಬಳಸುವಿಕೆ

೭. ಭಾಷೆಯಲ್ಲಿನ ಮೂರ್ತ ಮತ್ತು ಅಮೂರ್ತ ಗ್ರಹಿಕೆಗಳು

ಭಾಷೆಯಲ್ಲಿ ಧ್ವನಿ, ಪದ, ವಾಕ್ಯಗಳಿಗಿಂತ ಅವುಗಳಾಚೆಗೆ ಉಂಟಾಗುವ ಗ್ರಹಿಕೆ ಮುಖ್ಯ. ಈ ಗ್ರಹಿಕೆಯಲ್ಲಿ ಎರಡು ವಿಧ ಒಂದು ಮೂರ್ತಗ್ರಹಿಕೆ ಮತ್ತೊಂದು ಅಮೂರ್ತ ಗ್ರಹಿಕೆ ಲಿಂಗತಾರತಮ್ಯ ಎಂಬುದು ಭಾಷೆಯ ಮೂರ್ತಗ್ರಹಿಕೆಯಲ್ಲಿ ಉಂಟಾಗುತ್ತದೆಯೇ? ಅಥವಾ ಅಮೂರ್ತ ಗ್ರಹಿಕೆಯಲ್ಲಿ ಉಂಟಾಗುತ್ತದೆಯೇ ? ಎಂಬ ವಿಚಾರದ ಚರ್ಚೆಯನ್ನು ಈ ಮೊದಲನೆಯ ಅಧ್ಯಾಯ ಒಳಗೊಂಡಿರುತ್ತದೆ.

**೨. ಜ್ಞಾನಕ್ಕಾವಲಿಂಗ**

ಗಂಡು ಮತ್ತು ಹೆಣ್ಣಿನ ಆಲೋಚನಾ ಕ್ರಮ, ವಿಧಾನ ಹಾಗೂ ಅವರ ತಾತ್ವಿಕತೆ ಭಿನ್ನವೆಂದು ಹೇಳಲಾಗುತ್ತಿದೆ.ಈ ವಿಚಾರ ಹೌದೇ? ಅಲ್ಲವೇ ? ಹೌದಾದರೆ ಅದಕ್ಕೆ ಕಾರಣಗಳೇನು ? ಜ್ಞಾನಗಳಿಕೆಗೆ ಲಿಂಗತ್ವದ ತೊಡಕುಂಟೇ ? ಎಂಬ ವಿಚಾರಗಳ ಚರ್ಚೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗುತ್ತದೆ.

ಈ ಅಂಶಗಳಿಗೆ ಪೂರಕವಾಗಿ ಗಂಡು/ಹೆಣ್ಣಿನ ಚಿಂತನೆ, ವಿಚಾರಗ್ರಹಿಕೆ ಮತ್ತು ಅಭಿವ್ಯಕ್ತಿಗೆ ಸಂಬಂಧಪಟ್ಟಂತೆ ಕೆಲವು ಲಕ್ಷಣಗಳನ್ನು ವಿಂಗಡಿಸಿ ಆರೋಪಿಸಲಾಗಿದೆ. ಈ ಲಕ್ಷಣಗಳಕುರಿತ ಚರ್ಚೆಯನ್ನು ಕೂಡ ಈ ಅಧ್ಯಾಯ ಒಳಗೊಂಡಿರುತ್ತದೆ. ಮಹಿಳೆಯರ ವಿಚಾರಗಳು ಪುರುಷನ ವಿಚಾರಗಳಿಗಿಂತ ಕೀಳೆಂದು ಭಾವಿಸಲಾಗಿರುವಿಕೆ, ಪಾರಂಪರಿಕ ಸ್ತ್ರೀ ಪ್ರತೀಕಗಳಿಗಷ್ಟೇ ಮಹಿಳೆಯನ್ನು ಸೀಮಿತಗೊಳಿಸಿರುವ ಕಲ್ಪನೆಗಳು, ಸ್ತ್ರೀಯರನ್ನು 'ಒಳ ಜಗತ್ತಿ'ಗಷ್ಟೇ ಮೀಸಲಾಗಿಸುವಿಕೆಯ ಹಿಂದಿರುವ ಪುರುಷ ತಾತ್ವಿಕತೆ ಹಾಗೂ ಇಂದು

ಬದಲಾಗಿರುವ 'ಒಳ' ಮತ್ತು 'ಹೊರ ಜಗತ್ತಿನ' ಕಲ್ಪನೆಗಳ ಚರ್ಚೆಯನ್ನು ಈ ಅಧ್ಯಾಯ ಒಳಗೊಂಡಿರುತ್ತದೆ.

ಈ ಮೇಲಿನ ಅಂಶಗಳ ಚರ್ಚೆಗಾಗಿ, ಅಧ್ಯಯನದ ಅನುಕೂಲಕ್ಕಾಗಿ ಕೆಲವು ಉಪವಿಭಾಗಗಳನ್ನು ವಿಂಗಡಿಸಿಕೊಳ್ಳಲಾಗಿದೆ. ಅವುಗಳೆಂದರೆ,

೧. ಗಂಡಿನ ಆಲೋಚನಾ ಕ್ರಮ - ಹೆಣ್ಣಿನ ಆಲೋಚನಾ ಕ್ರಮ
೨. ಹೆಂಗಸು ಹರಟೆಯಲ್ಲಿಯೇ ?
೩. ಪುರುಷನಿಗಿಂತ ಹೆಣ್ಣು ಹೆಚ್ಚು ಭಾವುಕಳೇ ?
೪. ಮೆದುಳು ಮತ್ತು ಆಲೋಚನೆ

ಹರಟೆಯ ಗುಣ ಕೇವಲ ಹೆಣ್ಣಿಗೆ ಮಾತ್ರವೇ ಸೀಮಿತವೇ ? ಅಥವಾ ಇದು ಗಂಡು/ಹೆಣ್ಣು ಇಬ್ಬರಿಗೂ ಅನ್ವಯವಾಗುವ ಮಾನವರ ಪ್ರಕೃತಿ ಸಹಜವಾದ ಕ್ರಿಯೆಯೇ ಎಂಬುದರ ಚರ್ಚೆ, ಪುರುಷನಿಗಿಂತ ಹೆಣ್ಣು ಹೆಚ್ಚು ಭಾವುಕಳು ಎಂದು ಹೇಳಲಾಗುತ್ತಿದೆ. ಇದಕ್ಕೆ ಆಕೆಯ ದೇಹರಚನೆಯ ವಿನ್ಯಾಸ ಹಾಗೂ ಅವಳಲ್ಲಿ ಉತ್ಪತ್ತಿಯಾಗುವ ಹಾರ್ಮೋನುಗಳ ಪಾತ್ರವೇನಾದರೂ ಇದೆಯೇ ? ಎಂಬ ವಿಚಾರದ ಚರ್ಚೆ ಹಾಗೂ ಮೆದುಳು ಒಳಗೊಂಡಿರುವ 'ಎಡನಿಮ್ಮಿದುಳು' ಮತ್ತು ' ಬಲನಿಮ್ಮಿದುಳು' ಒಳಗೊಂಡಿರು ಪ್ರತ್ಯೇಕ ಭಾಷಿಕ ಗ್ರಹಿಕೆಯ ವಿಚಾರಗಳನ್ನು ವ್ಯಕ್ತಪಡಿಸಿದ ಪಾಲ್ ಬ್ರೋಕಾನ್ ಮತ್ತು ಕಾಲ್‌ವರ್ನಿಕೆ ಎಂಬ ನರವಿಜ್ಞಾನಿಗಳ ವಿಚಾರಗಳು ಹಾಗೂ ಇದರ ಹಿನ್ನೆಲೆಯಲ್ಲಿ ರಚಿತವಾದ ರೋಮನ್ ಜಾಕೋಬ್ಸನ್‌ನ 'ಮೆಟಫಾರಿಕ್' ಮತ್ತು 'ಮೆಟಾನಾಮಿಕ್' ಚಿಂತನೆಗಳ ಚರ್ಚೆಯನ್ನು ಈ ಅಧ್ಯಾಯ ಒಳಗೊಂಡಿರತುತ್ತದೆ.

**೩. ಸಾಹಿತ್ಯ ಕೃತಿಗಳಲ್ಲಿನ ಹೆಣ್ಣಿನ ಭಾಷಿಕ ನೆಲೆ**

ಭಾಷೆಯ ಸೃಜನಶೀಲ ಸೃಷ್ಟಿಯಾದ ಸಾಹಿತ್ಯವು ಸಂಸ್ಕೃತಿಯ ಒಂದು ಉತ್ಪಾದನೆಯಾಗಿದ್ದು ಅದು ತಾನು ಹುಟ್ಟಿಬಂದ ಸಂಸ್ಕೃತಿಯನ್ನೇ ಪ್ರತಿನಿಧಿಸುತ್ತಿರುತ್ತದೆ. ವಾಸ್ತವ ಬದುಕಿನ ತಾರತಮ್ಯಗಳು ಸಾಹಿತ್ಯ ಕೃತಿಗಳಲ್ಲೂ ಪ್ರತಿಮೂಡುತ್ತಿರುತ್ತವೆ. ಪಿತೃಪ್ರಧಾನ ತಾತ್ವಿಕತೆಗೆ ವಿರುದ್ಧವಾಗಿ ಮಹಿಳಾ ಬರಹಗಾರ್ತಿಯರು ತಮ್ಮ ಸಾಹಿತ್ಯ ಕೃತಿಗಳಲ್ಲಿ ತಮ್ಮ 'ಸ್ವ' ಅಭಿವ್ಯಕ್ತಿಗೆ ಮತ್ತು ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ತಮ್ಮದೇ

ಆದ ಹೊಸ ಭಾಷೆಯನ್ನು ಸೃಷ್ಟಿಸಿಕೊಳ್ಳಬೇಕು ಎಂಬ ಒಂದು ವಿಚಾರ ಪ್ರಚಲಿತದಲ್ಲಿತ್ತು. ಈ ವಾದದ ಹಿನ್ನೆಲೆಯಲ್ಲಿ ಕೆಲವು ಪ್ರಶ್ನೆಗಳನ್ನು ಮುಂದಿರಿಸಿಕೊಂಡು ಸಾಹಿತ್ಯ ಕೃತಿಗಳ ಮುಖಾಂತರ ಹೆಣ್ಣಿನ ಭಾಷಿಕ ನೆಲೆಯ ಅಧ್ಯಯನ ಕೈಗೊಳ್ಳುವುದು ಈ ಅಧ್ಯಾಯದ ಚರ್ಚಿತ ವಿಚಾರ. ಆ ಕೆಲವು ಪ್ರಶ್ನೆಗಳೆಂದರೆ,

- ❐ ಅವಳ ಸ್ವಂತ ಅಭಿವ್ಯಕ್ತಿಗೆ ಸ್ವಂತ ಭಾಷೆಯನ್ನು ರೂಪಿಸಿಕೊಂಡಿದ್ದಾಳೆಯೇ?
- ❐ ಜೀವಶಾಸ್ತ್ರೀಯ ಹೆಣ್ತನದ ಭಿನ್ನತೆಯ ಮುಖಾಂತರ ಹೊಸದಾದ ಸ್ತ್ರೀಸಂಸ್ಕೃತಿಯೊಂದನ್ನು ಸಾಹಿತ್ಯ ಕೃತಿಗಳಲ್ಲಿ ನಿರ್ಮಿಸಲು ಮಹಿಳಾ ಬರಹಗಾರ್ತಿಯರಿಗೆ ಸಾಧ್ಯವಾಗಿದೆಯೇ ?
- ❐ ಸಾಂಸ್ಕೃತಿಕ ಬಂಧನಗಳ ಮಿತಿಗಳನ್ನು ಸೃಜನಶೀಲ ನೆಲೆಯಲ್ಲಿ ಮೀರುವ ಹಾಗೂ ಮಾನವರ ಸಮಗ್ರತೆಯ ಪರಿಕಲ್ಪನೆ ಸ್ತ್ರೀ-ಪುರುಷ ಸಾಹಿತಿಗಳಿಬ್ಬರಲ್ಲೂ ಸಾಧ್ಯವಾಗಿದೆಯೇ ? ಅಪ್ರಜ್ಞಾಪೂರ್ವಕವಾಗಿ ಏಕತೆಯ ಭಾವನೆಯನ್ನು ಸಾಧಿಸಲು ಸಾಧ್ಯವೇ?

ಈ ಅಂಶಗಳ ಸ್ಪಷ್ಟೀಕರಣಕ್ಕಾಗಿ ಕನ್ನಡಸಾಹಿತ್ಯ ಸಂದರ್ಭದಲ್ಲಿ ಪುರುಷ ಬರಹಗಾರರು ಮತ್ತು ಮಹಿಳಾ ಬರಹಗಾರ್ತಿಯರ 'ಕಥನ' ಹಾಗೂ 'ಕಾವ್ಯ'ದ ನೆಲೆಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನವನ್ನು ಕೈಕೊಳ್ಳಲಾಗಿದೆ. ಪುರುಷ ಬರಹಗಾರರಲ್ಲಿ ಕುವೆಂಪು, ಅನಂತಮೂರ್ತಿ, ದೇವನೂರ ಮಹಾದೇವ, ಗೋಪಾಲಕೃಷ್ಣ ಅಡಿಗ, ಮಧುರಚೆನ್ನ ಹಾಗೂ ಮಹಿಳಾ ಬರಹಗಾರ್ತಿಯರಲ್ಲಿ ತ್ರಿವೇಣಿ, ವೀಣಾಶಾಂತೇಶ್ವರ, ಭಾಗ್ಯಜಯಸುದರ್ಶನ, ಎಂ.ಆರ್. ಕಮಲ, ಎನ್.ವಿ. ಭಾಗ್ಯಲಕ್ಷ್ಮಿಯವರ ಕೃತಿಗಳನ್ನು ಗಮನದಲ್ಲಿಟ್ಟುಕೊಳ್ಳಲಾಗಿದೆ.

ಈ ಅಧ್ಯಾಯದಲ್ಲಿ ಕೂಡ ವಿಚಾರಾನುಸಾರವಾಗಿ ಕೆಲವು ಉಪವಿಭಾಗಗಳನ್ನು ವಿಂಗಡಿಸಿಕೊಳ್ಳಲಾಗಿದೆ. ಅವುಗಳೆಂದರೆ,

೧. ಸ್ವಂತ ಅಭಿವ್ಯಕ್ತಿಗೆ ಸ್ವಂತ ಭಾಷೆ ರೂಪಿಸಿಕೊಂಡಿದ್ದಾಳೆಯೇ ?

೨. ನವ ಮಹಿಳೆಯ ಶೋಧನಾತ್ಮಕ ಮೌಲ್ಯ

೩. ಮುಕ್ತ ಅಭಿವ್ಯಕ್ತಿ ಸಾಧ್ಯವಾಗಿದೆಯೇ ?

೪. ಹೆಣ್ಣಿನ ಭಾಷೆ ಮಾತಿನಿಂದ ಮೌನದೆಡೆಗೆ

೫. ಭಾಷೆಯ ಸ್ಥಾಪಿತ ಅಥವಾ ರೂಢಿಗತ ರಚನೆ, ಬಳಕೆಗಳನ್ನು ಮೀರುವಿಕೆ

ಸೃಜನಶೀಲ ನೆಲೆಯಲ್ಲಿ ಮಹಿಳೆ ತನ್ನ ಸ್ವಂತ ಅಭಿವ್ಯಕ್ತಿಗೆ ಸ್ವಂತ ಭಾಷೆ ರೂಪಿಸಿಕೊಳ್ಳಲು ಸಾಧ್ಯವಾಗಿದೆಯೇ? ಪುರುಷ ಸ್ಥಾಪಿತ ಮೌಲ್ಯವ್ಯವಸ್ಥೆಯ ವಿರುದ್ಧ ನವ ಮಹಿಳೆಯರ ಶೋಧನಾತ್ಮಕ ಮೌಲ್ಯ ಎಂಥದ್ದು ? ಈ ಹೊಸ ಮೌಲ್ಯಗಳನ್ನು ಕಟ್ಟಿಕೊಳ್ಳುವಲ್ಲಿ ಅವಳಿಗೆ ಮುಕ್ತ ಅಭಿವ್ಯಕ್ತಿ ಸಾಧ್ಯವಾಗಿದೆಯೇ? ಎಂಬ ವಿಚಾರಗಳ ಚರ್ಚೆಗೆ ವೀಣಾಶಾಂತೇಶ್ವರ ಅವರ 'ಶೋಷಣೆ ಬಂಡಾಯ ಇತ್ಯಾದಿ' ಮತ್ತು 'ಗಂಡಸರು' ಕಾದಂಬರಿಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಳ್ಳಲಾಗಿದೆ. ಇದಕ್ಕೆ ಪೂರಕವಾಗಿ ಅವರ ಇತರ ಕೆಲವು ಕಥೆಗಳನ್ನೂ ಕೂಡ ಬಳಸಿಕೊಳ್ಳಲಾಗಿದೆ.

ಪಿತೃಪ್ರಧಾನ ವ್ಯವಸ್ಥೆಯಲ್ಲಿ ಅಧಿಕಾರ ರೂಢನಾದ ಪುರುಷ ಹೆಣ್ಣಿಗೆ ಯಾವುದೇ ವಿಷಯದಲ್ಲಾಗಲಿ ಮುಕ್ತ ಅಭಿವ್ಯಕ್ತಿಗೆ ಅವಕಾಶ ನೀಡುವುದಿಲ್ಲ ಆಗ ಹೆಣ್ಣಿನ ಭಾಷೆ ಮಾತಿನಿಂದ ಮೌನದೆಡೆಗೆ ಚಲಿಸುತ್ತದೆ. ಈ ವಿಚಾರದ ಚರ್ಚೆಗೆ ಪುರುಷ ತಾತ್ವಿಕತೆಯ ಹಿನ್ನೆಲೆಯಲ್ಲಿ ರಚಿತವಾಗಿರುವ ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ'ಮತ್ತು 'ಭಾರತೀಪುರ' ಕಾದಂಬರಿಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಳ್ಳಲಾಗಿದೆ.

ಪ್ರಪಂಚದಲ್ಲಿನ ಪ್ರತಿಯೊಂದು ಭಾಷೆಯೂ ಅನೇಕ ಪೂರ್ವರೂಢಿಗತ ಮೌಲ್ಯಗಳನ್ನು ಒಳಗೊಂಡಿರುತ್ತವೆ. ಈ ಸಾಂಸ್ಕೃತಿಕ ಬಂಧನಗಳ ಮಿತಿಗಳನ್ನು ಮೀರುವ ಹಾಗೂ ಮಾನವರ ಸಮಗ್ರತೆಯ ಪರಿಕಲ್ಪನೆಗೇರುವ ಪ್ರಕ್ರಿಯೆ ಸೃಜನಶೀಲ ನೆಲೆಯಲ್ಲಿ ಪುರುಷ ಬರಹಗಾರರಿಗೆ ಸಾಧ್ಯವಾಗಿದೆಯೇ? ಅಥವಾ ಮಹಿಳಾ ಬರಹಗಾರ್ತಿಯರಿಗೆ ಸಾಧ್ಯವಾಗಿದೆಯೇ ?ಎಂಬ ವಿಚಾರದ ಚರ್ಚೆಗೆ ಭಾಗ್ಯ ಜಯಸುದರ್ಶನ ರವರ 'ಬಳುವಳಿ' ಎಂ.ಆರ್. ಕಮಲರವರ 'ನಾನು', ಎನ್.ವಿ. ಭಾಗ್ಯಲಕ್ಷ್ಮಿಯವರ 'ಪ್ರತಿ-ಕ್ರಿಯೆ' , ಅಡಿಗರ 'ಭೂಮಿಗೀತ' ಮಧುರಚೆನ್ನರ 'ನನ್ನ ನಲ್ಲ' ಕವನಗಳನ್ನುಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಳ್ಳಲಾಗಿದೆ.

## ೭. ಮಾಹಿತಿ ಸಂಗ್ರಹಣೆ ಮತ್ತು ವಿಶ್ಲೇಷಣೆ

ಇತ್ತೀಚಿನ ದಿನಗಳಲ್ಲಿ ಮಹಿಳೆಯು ಎಲ್ಲಾ ಕ್ಷೇತ್ರದಲ್ಲೂ ತನ್ನ ಅಸ್ಥಿತ್ವವನ್ನು ಗುರುತಿಸಿಕೊಳ್ಳಲು ಮುಂದಾದಂತೆ ಭಾಷೆಯಲ್ಲೂ ಕೂಡ ತನ್ನ ಅಸ್ಥಿತ್ವವನ್ನು ಕಾಯ್ದುಕೊಳ್ಳಲು ಪುರುಷವಾಚಕಗಳಿಗೆ ಬದಲಾಗಿ ಸ್ತ್ರೀವಾಚಕಗಳನ್ನು ಸೃಷ್ಟಿಸಿ ಕೊಳ್ಳುತ್ತಿದ್ದಾಳೆ. ಈ 'ಸೃಷ್ಟಿಕ್ರಿಯೆ' ಕೇವಲ ಪ್ರಜ್ಞಾಪೂರ್ವಕ ನೆಲೆಯಲ್ಲಿ ನಡೆಯುತ್ತಿದೆಯೇ? ಅಥವಾ ಆ ಸಮುದಾಯದ ಸಾಂಸ್ಕೃತಿಕ ಭಾಗವಾಗಿ ಬಳಕೆಗೊಳ್ಳುತ್ತಿದೆಯೇ ? ಎಂಬ ಅಂಶವನ್ನು ಸ್ಪಷ್ಟ ಪಡಿಸಿಕೊಳ್ಳಲು ಗ್ರಾಮೀಣ ಪ್ರದೇಶವನ್ನು ಆಯ್ಕೆಮಾಡಿಕೊಂಡು ಅಲ್ಲಿನ ವಿವಿಧ ವಯೋಮಾನದ ಸ್ತ್ರೀ-ಪುರುಷರಿಬ್ಬರಲ್ಲೂ ಕೆಲವು ವಿಚಾರಗಳ ಸಣ್ಣ ಟಿಪ್ಪಣಿ ರಚಿಸಿಕೊಂಡು ಅವರು ಬಳಸುವ ಭಾಷಿಕ ನೆಲೆಯನ್ನು ಅಧ್ಯಯನ ಮಾಡಲಾಗುತ್ತದೆ.

ಕೆಲವು ಪ್ರಶ್ನಗೆಳನ್ನಿಟ್ಟುಕೊಂಡು ಸಂಗ್ರಹಿಸಿದ ಮಾಹಿತಿಯನ್ನು ವಿಶ್ಲೇಷಿಸುವುದು ಈ ಅಧ್ಯಯನದ ಉದ್ದೇಶ.ಆ ಕೆಲವು ಪ್ರಶ್ನೆಗಳೆಂದರೆ,

- ❒ ಸ್ತ್ರೀವಾಚಕಗಳ ಬಳಕೆ ಸಾಮಾಜಿಕ ಸಂದರ್ಭದಲ್ಲಿ ವೈಯಕ್ತಿಕ ನೆಲೆ ಹಾಗೂ ಸಮುದಾಯದ ನಲೆಗಳೆರಡರಲ್ಲಿಯೂ ಅಸ್ಥಿತ್ವ ಪಡೆದಿವೆಯೇ ? ಪಡೆಯುತ್ತಿವೆಯೇ ಅಥವಾ ಇಲ್ಲವೇ ?
- ❒ ಎಲ್ಲಾ ವಯೋಮಾನದ ಸ್ತ್ರೀ ಪುರುಷರಿಬ್ಬರಲ್ಲೂ ಸ್ತ್ರೀವಾಚಕಗಳು ಹಾಗೂ ಪುರುಷ ವಾಚಕಗಳನ್ನು ಪ್ರಜ್ಞಾಪೂರ್ವಕವಾಗಿ ಬಳಸುವ ಪರಿಪಾಠ ಶುರುವಾಗಿದೆಯೇ? ಅಥವಾ ಇಲ್ಲವೇ ?
- ❒ ಪುರುಷವಾಚಕಗಳು / ಸ್ತ್ರೀವಾಚಕಗಳು ಎಂದು ಗೆರೆ ಎಳೆದು ಬಳಸುವುದಕ್ಕಿಂತ ಹೊಸ ರೀತಿಯ ಪದಗಳನ್ನು ಸೃಷ್ಟಿಸಿ ಬಳಸುವ ಪರಿಪಾಠವೇನಾದರೂ ಇದೆಯೇ?
- ❒ ಸ್ತ್ರೀವಾಚಕ ಪದಗಳ ಬಳಕೆಯ ಮಾತಂತಿರಲಿ ಅದರ ಗ್ರಹಿಕೆಯಾದರೂ ಆ ಸಮುದಾಯದ ಜನರೆಲ್ಲರಲ್ಲಿಯೂ ಮೂಡಿದೆಯೇ ?

ಈ ಮೇಲಿನ ಪ್ರಶ್ನೆಗಳನ್ನಿಟ್ಟುಕೊಂಡು ಸಂಗ್ರಹಿಸಿದ ಮಾಹಿತಿಯನ್ನು ವಿಶ್ಲೇಷಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

**ಆಯ್ಕೆಯ ಪ್ರದೇಶ ಮತ್ತು ವಿವಿಧ ವಯೋಮಾನ**

ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಪ್ರದೇಶ 'ಗ್ರಾಮೀಣ ಪ್ರದೇಶ'. ಇಂದು ಸೃಷ್ಟಿಯಾಗುತ್ತಿರುವ ಸ್ತ್ರೀಲಿಂಗ ವಾಚಕಗಳು ಆ ಸಮುದಾಯದ ಎಲ್ಲಾ ಸ್ತರದ ವ್ಯಕ್ತಿಗಳಲ್ಲಿಯೂ ಬಳಕೆಗೆ ಒಳಪಡುತ್ತಿದೆಯೇ ಎಂಬ ಅಂಶವನ್ನು ಸ್ಪಷ್ಟಪಡಿಸಿಕೊಳ್ಳಲು ವಿವಿಧ ವಯೋಮಾನದ ಸ್ತ್ರೀ -ಪುರುಷರು ಬಳಸುವ ಭಾಷಿಕ ನೆಲೆಯನ್ನು ಗಮನದಲ್ಲಿರಿಸಿಕೊಂಡು ಚರ್ಚಿಸಲಾಗುತ್ತದೆ. ಅವುಗಳೆಂದರೆ,

ವಿವಿಧ ವಯೋಮಾನ

೧. ೨೦

೨. ೪೦

೩. ೬೦+

**ಅಧ್ಯಯನದ ಮಿತಿಗಳು**

ಈ ಅಧ್ಯಯನವೂ ಭಾಷೆಯಲ್ಲಿನ ಲಿಂಗತಾರತಮ್ಯದ ಸ್ವರೂಪವನ್ನು ಚರ್ಚಿಸಲು ಬರಹದ ಭಾಷೆಯನ್ನು ಹೆಚ್ಚು ಅವಲಂಬಿಸಿದೆ. ಸಾಮಾಜಿಕ ಸಂದರ್ಭದಲ್ಲಿ ಬಳಕೆಗೊಳ್ಳುತ್ತಿರುವ ಭಾಷೆಯನ್ನು ಗಮನದಲ್ಲಿರಿಸಿಕೊಂಡು ಚರ್ಚಿಸಲಾಗಿದೆಯೆ ವಿನಃ ಜನರ ಬಳಿ ಹೋಗಿ ಅವರನ್ನು ಸಂದರ್ಶಿಸಿ ಮಾಹಿತಿ ಸಂಗ್ರಹಿಸಲಾಗಿಲ್ಲ. ಮಾಹಿತಿ ಸಂಗ್ರಹಣೆ ಮತ್ತು ವಿಶ್ಲೇಷಣೆ ಎಂಬ ಅಧ್ಯಾಯದಲ್ಲೂ ಕೂಡ ಪ್ರಸ್ತುತ ಸಂದರ್ಭದಲ್ಲಿನ ಜನರ ಬರಹದ ಭಾಷೆಯನ್ನೇ ಅಧ್ಯಯನ ಅವಲಂಬಿಸಿದೆ.

# ಅಧ್ಯಾಯ - ೨

## ಭಾಷೆ ಮತ್ತು ಲಿಂಗಭೇದ

ನಮ್ಮ ಪ್ರತಿಯೊಂದು ಆಲೋಚನೆಗಳು, ಗ್ರಹಿಕೆಗಳು ರೂಪತಾಳುವುದು ವೈರುಧ್ಯಗಳ ನೆಲೆಯಿಂದಲೆ. ಪ್ರತಿವಿಚಾರದಲ್ಲೂ ಈ ದ್ವಿಮಾನ ವೈರುದ್ಯದ ಕಲ್ಪನೆ ಇರಲೇಬೇಕು. ಏಕೆಂದರೆ ಒಂದರ ಅರ್ಥ ಸ್ಪಷ್ಟವಾಗುವುದು ಅದರ ವಿರೋಧಿ ಅರ್ಥದಿಂದ ಮಾತ್ರ. ಬುದ್ಧಿವಂತಿಕೆ ಎಂಬುದು ಸ್ಪಷ್ಟವಾಗುವುದು, ಅದರ ಎದುರಿಗೆ ದಡ್ಡತನವಿದ್ದಾಗ ಮಾತ್ರ. ಜಡವೇ ಇಲ್ಲದೆ ಇದ್ದ ಮೇಲೆ ಚೈತನ್ಯವನ್ನು ಕಲ್ಪಿಸಿಕೊಳ್ಳಲಾಗುತ್ತಿರಲಿಲ್ಲ.

| | | |
|---|---|---|
| ಒಳಿತು | x | ಕೆಡಕು |
| ರಾತ್ರಿ | x | ಹಗಲು |
| ಪ್ರಕೃತಿ | x | ಸಂಸ್ಕೃತಿ |
| ಎಡ | x | ಬಲ |
| ಶುಭ | x | ಅಶುಭ |
| ಗಂಡು | x | ಹೆಣ್ಣು |

ಹೀಗೆ ಪ್ರತಿಯೊಂದು ವಿಚಾರದಲ್ಲೂ ದ್ವಿಮಾನ ಕಲ್ಪನೆ ಇರುತ್ತದೆ. ಆದರೆ ಈ ವಿಭಜಿತ ಗ್ರಹಿಕೆಗಳು ಉಂಟಾಗಲು ಕಾರಣವೇನು ? ಅದರಲ್ಲೂ ಮನುಷ್ಯರು ತಮಗೆ ಅನುಕೂಲವಾದ ವಿಚಾರಗಳಿಗೆ ಶ್ರೇಷ್ಠವೆಂತಲೂ, ಅನಾನುಕೂಲವಾದ ವಿಚಾರಗಳಿಗೆ ಕನಿಷ್ಠವೆಂತಲೂ ನಾಮಕರಣ ಮಾಡುತ್ತಾ ಬಂದರು. ಜೊತೆಗೆ ಸ್ವ/ ಅನ್ಯ ಎಂಬ ಕಲ್ಪನೆಗಳನ್ನು ಸಹ ಮೂಡಿಸಿಕೊಂಡರು

ಪ್ರಕೃತಿಯಲ್ಲಿ ಪ್ರಬಲನಾದ ವ್ಯಕ್ತಿ ತನ್ಮೂಲಕ ಇತರರನ್ನು ನೋಡುವಾಗ, ತನ್ನನ್ನು ಸ್ಥಾಪಿಸಿಕೊಳ್ಳುವಾಗ ತನ್ನಲ್ಲಿಲ್ಲದ್ದು, ತನ್ನದ್ದಲ್ಲದ್ದು ಅನ್ಯ, ಕೀಳು ಎಂದು ಭಾವಿಸಲು ಮುಂದಾದ ಆಗಲೇ ಸ್ವ ಮತ್ತು ಅನ್ಯ ಎಂಬ ಕಲ್ಪನೆ ಮೂಡಿದ್ದು ಎಂದು ಹೇಳಬಹುದು.

ಅನ್ಯ ಎಂದು ವಿಭಜಿಸಿಕೊಳ್ಳುವುದು ಮನುಷ್ಯ ಪ್ರಜ್ಞೆಯಷ್ಟೇ ಆದಿಮವಾದದ್ದು. 'ಪ್ರಜ್ಞೆಎಂಬುದೇ ಇತರ ಎಲ್ಲಾ ಪ್ರಜ್ಞೆಗಳಿಗೆ ಎದುರಾಳಿಯಾಗಿ ವೇಷ ತಳೆದಿರುವಂಥದ್ದು''[೧] ಎಂಬ ಹೆಗಲ್‌ನ ಅಭಿಪ್ರಾಯ ಅರ್ಥ ಪೂರ್ಣವಾದುದು. ಅನ್ಯ ಪ್ರಜ್ಞೆ ಎಂದರೆ ಅಧೀನ

ಪ್ರಜ್ಞೆ ಎಂದರ್ಥ. ಇದರಲ್ಲಿ ಲಿಂಗಭೇದವು ಬಹಳ ಪ್ರಮುಖವಾದದ್ದು. ಯಾವುದೇ ದ್ವಿಮಾನದ ಕಲ್ಪನೆ ಮೊದಲಲ್ಲಿ ಲಿಂಗಭೇದವನ್ನು ಸೂಚಿಸುತ್ತಿರಲಿಲ್ಲ. ಹಗಲು-ರಾತ್ರಿ, ಒಳಿತು-ಕೆಡಕು, ಶುಭ-ಅಶುಭ, ಎಡ-ಬಲ ಎಂಬಲ್ಲಿ ಪುರುಷತ್ವದ ಅಥವಾ ಸ್ತ್ರೀತ್ವದ ಅಂಶವೇ ಇಲ್ಲ. ಮಾನವರ ಚಿಂತನೆಯಲ್ಲಿ 'ಅನ್ಯತ್ವ' ಎಂಬುದು ಒಂದು ಕಲ್ಪಿತ ವಿಂಗಡಣೆ.

ಲೆವಿಸ್ಟ್ರಾಸ್ ''ಪ್ರಾಕೃತಿಕ ಅವಸ್ಥೆಯಿಂದ ಸಾಂಸ್ಕೃತಿಕ ಅವಸ್ಥೆಗೆ ದಾಟಿ ಬರುವ ಪ್ರಕ್ರಿಯೆಯಲ್ಲಿ ಮನುಷ್ಯರು ಜೈವಿಕ ಸಂಬಂಧಗಳನ್ನು ಹಲವಾರು ವೈಸಾದೃಶ್ಯಗಳ ಸರಣಿಯೆಂದು ಗುರುತಿಸಲು ಸಮರ್ಥರಾಗಿರುವುದು ಕಂಡು ಬರುತ್ತದೆ. ದ್ವಿತ್ವ, ಪರ್ಯಾಯ ವಿರೋಧ, ಸಾಮ್ಯ ಇವೇ ಆ ವೈಸಾದೃಶ್ಯಗಳು. ಹೀಗೆ ಗುರುತಿಸುವ ವೈಸಾದೃಶ್ಯಗಳು ಕೆಲವೊಮ್ಮೆ ಸ್ಪಷ್ಟವೂ ಮತ್ತೆ ಕೆಲವೊಮ್ಮೆ ಅಸ್ಪಷ್ಟವೂ ಆಗಿರುತ್ತವೆ. ಆದರೆ ಇವು ಯಾವುದೇ ಸಾಮಾಜಿಕ ವಾಸ್ತವದಿಂದ ದತ್ತವಾದ ಸಂಗತಿಗಳ ಮೂಲಕ ವಿವರಿಸಲು ಬರುವಂಥವಲ್ಲ''[3] ಎಂದುಅಭಿಪ್ರಾಯ ಪಡುತ್ತಾನೆ.

ದ್ವಿಮಾನದ ಕಲ್ಪನೆ ಮೊದಲು ವೈರುಧ್ಯಗಳಿಂದ ಕೂಡಿರಲಿಲ್ಲ. ಒಂದು ಇನ್ನೊಂದರ ಅಸ್ತಿತ್ವದ ಬಗ್ಗೆ ಅರಿವು ಹೊಂದಿಲ್ಲದೆಯೂ ಇದ್ದಿರಬಹುದು ಅಥವಾ ಒಂದು ಇನ್ನೊಂದರ ಸ್ವಾಯತ್ತತೆಯನ್ನು ಒಪ್ಪಿಕೊಂಡಿದ್ದಿರಬಹುದು. ಆದರೆ ಚಾರಿತ್ರಿಕ ಘಟನೆಗಳಿಂದಾಗಿ ಬಲಾಢ್ಯವು ದುರ್ಬಲರನ್ನು ಕೈವಶ ಮಾಡಿಕೊಳ್ಳುವಂತಾಯಿತು.

ಗಂಡು ತನ್ನನ್ನು ತಾನು ಯಾವುದರಲ್ಲಿ ಕಂಡುಕೊಳ್ಳುತ್ತಾನೋ ಆ ಅನ್ಯವೇ ಹೆಂಗಸು. ಗಂಡು ತಾನು ನಿಯೋಗಿ ಎಂದು ಮುಕ್ತಜೀವಿ ಎಂದು ಸ್ಥಾಪಿಸಲು ಹೊರಟ ಕೂಡಲೇ ಅಧೀನದ ಪರಿಕಲ್ಪನೆ ತಲೆ ಎತ್ತಿತು. 'ಸ್ವ' ದ ಕಲ್ಪನೆಯೂ 'ಅನ್ಯ' ದ ಸ್ವಾಯತ್ತತೆಯನ್ನು ನಾಶಗೊಳಿಸಿ ಅದು ಅವಲಂಬಿ ಎಂದು ಸ್ಥಾಪಿಸುವ ಗುರಿಯನ್ನೇ ಹೊಂದಿರುತ್ತದೆ. ಆಗ ಪ್ರಧಾನ / ಅಧೀನಗಳ ಕಲ್ಪನೆ ಜಾಗೃತಗೊಳ್ಳುತ್ತದೆ. ಹಾಗಾದರೆ ಗಂಡೇ ಪ್ರಧಾನ, ಹೆಣ್ಣು ಅಧೀನ ಎಂಬ ಕಲ್ಪನೆ ಮಾಡಿದ್ದು ಯಾವಾಗ ?

ಪಿತೃಪ್ರಧಾನ ವ್ಯವಸ್ಥೆಯಲ್ಲಿ ಪುರುಷಾಧಿಕಾರದ ತಾತ್ವಿಕತೆಯೂ ಅಪ್ರಜ್ಞಾಪೂರ್ವಕ ನೆಲೆಯಲ್ಲಿದ್ದು ಪ್ರತಿನಿಧೀಕರಣದ ಮೂಲಕ ಜನರ ಮೇಲೆ ಹೇರಲ್ಪಡುತ್ತದೆ. ಅವು ಜನರಲ್ಲಿ ರೂಢಿಗತವಾಗಿ, ಧಾರ್ಮಿಕ ಆಚರಣೆಗಳು,

ವಿಧ್ಯುಕ್ತಕ್ರಿಯೆಗಳ ಮೂಲಕ ಸಾಂಸ್ಕೃತಿಕವಾಗಿ ಪುನರುತ್ಪಾದಿತವಾಗುತ್ತಿರುತ್ತವೆ. ಈ ಯಜಮಾನಿಕೆಯದೆ ಒಂದು ಭಾಗ ಲಿಂಗ ಪ್ರಭೇದ. ಅದು ಗಂಡು/ಹೆಣ್ಣು ಸ್ವಭಾವಗಳೆಂದು ಜನರನ್ನು ವಿಭಜಿಸಿ ಶ್ರೇಣೀಕರಿಸುತ್ತದೆ. ತಾನು ರೂಪಿಸಿರುವ ನಿಯಮಗಳನ್ನು ಕೆಲವು ನಿರ್ದೇಶನಗಳ ಮೂಲಕ ವ್ಯವಸ್ಥೆಯ ಎಲ್ಲಾ ಸ್ತರಗಳೊಳಗೂ ಈ ಯಜಮಾನಿಕೆಯು ತನ್ನನ್ನು ಬಲಪಡಿಸಿಕೊಳ್ಳುತ್ತಿರುತ್ತದೆ.

ಲಿಂಗ ವಿಭಜನೆ ಎಂಬುದು ಒಂದು ಜೈವಿಕ ಸಂಗತಿಯೇ ಹೊರತು ಮಾನವ ಚರಿತ್ರೆಯ ಒಂದು ಘ ಟನೆ ಅಲ್ಲ.[೩] ಈ ರಚನೆಯಲ್ಲಿ ಇರುವ ಎರಡು ಲಿಂಗಗಳು ಒಂದು ಇನ್ನೊಂದನ್ನು ಬಿಟ್ಟಿರಲಾರದ ಅನಿವಾರ್ಯತೆ ಇದೆ. ಆದರೆ ರಚನೆಯಲ್ಲಿ ಮಾತ್ರ ಅವಳು 'ಅನ್ಯ'ಳು ಅನ್ಯಳು ಎಂದು ಹೇಳುವ ದೃಷ್ಟಿಕೋನವೇ ಪುರುಷನದು. ಅವಳ ದೃಷ್ಟಿಯಲ್ಲಿ ಅವನು ಕೂಡ ಅನ್ಯನೆ. ಆದರೆ ಈ ವ್ಯವಸ್ಥೆಯಲ್ಲಿ ಹೆಣ್ಣಿನ ದೃಷ್ಟಿಕೋನಕ್ಕೆ ಹಿಂದೆ ಎಂದೂ ಬೆಲೆ ಇರಲಿಲ್ಲವೇ ? ಅವಳು ಏಕೆ ಅನ್ಯಳಾದಳು ?

ಮಾತೃಸ್ಥಾನೀಯ ಕುಟುಂಬ ವ್ಯವಸ್ಥೆ ಪ್ರಾರಂಭಿಕ ಹಂತದಲ್ಲಿ ಇದ್ದರೂ ಗಂಡೇ ಅಧಿಕಾರಿಯಾಗಿ ಗೆದ್ದದ್ದು ಹೇಗೆ ? ಪೌಲಿನ ಡೆ ಲಾ ಬಾರ್ ಎಂಬ ಪಾಶ್ಚಾತ್ಯ ಸ್ತ್ರೀವಾದಿ ಹೇಳುವಂತೆ ''ಗಂಡಸು ಏಕಕಾಲಕ್ಕೆ ಪ್ರತಿವಾದಿಯೂ ಆಗಿರುತ್ತಾನೆ, ನ್ಯಾಯಾಧೀಶನೂ ಆಗಿರುತ್ತಾನೆ.''[೪] ಯಾವಾಗಲೂ ಯಜಮಾನ ವರ್ಗವು ಅಧೀನವರ್ಗವನ್ನು 'ಸೂಕ್ತಸ್ಥಾನ'ದಲ್ಲಿ 'ಇರಿಸಲು' ಬಯಸುತ್ತದೆ. ಜೊತೆಗೆ ಕೆಲವು ನೈತಿಕತೆಗಳ ಆರೋಪವನ್ನು ಹೊರಲಿಚ್ಚಿಸುತ್ತದೆ. ನೈತಿಕತೆಯೇ ಒಂದು ಕಲ್ಪಿತ ಆದರ್ಶ, ವಾಸ್ತವ ಅಲ್ಲ. ವಾಸ್ತವವಾಗಿ ಹೆಣ್ಣು ಮೌಲ್ಯಗಳನ್ನು ಗಂಡು ಮೌಲ್ಯಗಳಿಗೆ ವಿರುದ್ಧವಾದವುಗಳು ಎಂದು ಕಲ್ಪಿಸಿದ್ದಲ್ಲ. ತನ್ನ ಪುರುಷ ಸಾಧನಗೆಳನ್ನು ಬಳಸಿಕೊಳ್ಳುವ ಅಪೇಕ್ಷೆಯಿಂದ ಗಂಡು ಈ ಎರಡೂ ಮೌಲ್ಯಗಳನ್ನು ಬೇರೆ ಬೇರೆ ಮಾಡಿ ಹೆಣ್ಣಿಗಾಗಿ ಒಂದು ಪ್ರತ್ಯೇಕ ವಲಯವನ್ನು ರೂಪಿಸಿದ್ದಾನೆ.

ಮಾನವರ ಈ ದ್ವಿಮಾನದ ಕಲ್ಪನೆ ಅವರ ಜೀವನದ ಪ್ರತಿಯೊಂದು ವಿಚಾರದಲ್ಲೂ ಸದಾ ಸಾಕಾರಗೊಳ್ಳುತ್ತಲೇ ಇರುತ್ತವೆ. ಅದೇ ರೀತಿ 'ಭಾಷೆ'ಯಲ್ಲೂ ಕೂಡ ಈ ದ್ವಿಮಾನದ ಕಲ್ಪನೆ ನೆಲೆಮಾಡಿಕೊಂಡಿದೆ ಎಂಬುದು ನಮ್ಮ ಅನೇಕ ಭಾಷಾ ಶಾಸ್ತ್ರಜ್ಞರ ಹಾಗೂ ಸ್ತ್ರೀವಾದಿಗಳ ವಾದ. ಈ ವಾದ ಹೌದೇ ? ಅಲ್ಲವೇ ? ಹೌದಾದರೆ

ಅದಕ್ಕೆ ಕಾರಣಗಳೇನು ? ಭಾಷೆ ಎಂಬುದು ಈ ರೀತಿಯ ದ್ವಿಮಾನದ ಕಲ್ಪನೆಯಿಂದ ಜನ್ಮತಾಳಿತೆ ? ಅಥವಾ ಮನುಷ್ಯರ ದ್ವಿಮಾನದ ಆಲೋಚನೆಗಳು ಭಾಷೆಯಲ್ಲಿಯೂ ಸಾಕಾರಗೊಂಡು ಅದು ಗಂಡು/ಹೆಣ್ಣು ವರ್ಗಗಳಿಗೆ ಸೀಮಿತವಾಗುವಂತಾಯಿತೆ ?

ಗಂಡು/ಹೆಣ್ಣು, ಪ್ರಧಾನ/ಅಧೀನ, ಶ್ರೇಷ್ಠ/ಕನಿಷ್ಠ ಎಂಬ ನಾಮಪಟ್ಟಿಗಳ ಮುಖಾಂತರವೇ ಭಾಷೆ ಸೃಷ್ಟಿಯಾಗಿದೆಯೇ ? ಅಥವಾ ಮೂಲದಲ್ಲಿ ಈ ರೀತಿಯ ಭೇದ ಭಾವವಿಲ್ಲದೆ ಸಮಾನ ನೆಲೆಯಲ್ಲಿ ಸೃಷ್ಟಿಯಾದ ಭಾಷೆ ನಂತರದ ದಿನಗಳಲ್ಲಿ ಪುರುಷ ಮೂಲೀಯಾ ಸ್ಥಾನ ಪಡೆದಿದೆಯೇ ? ಬಹಳ ಮುಖ್ಯವಾಗಿ ಗಮನಿಸಬೇಕಾದ ವಿಚಾರವೆಂದರೆ, ಭಾಷೆಯಲ್ಲಿ ಎರಡು ವಿಧಗಳಿವೆಯೇ ?ಅಥವಾ ಎಂದು ದೃಷ್ಟಿಕೋನಗಳಿವೆಯೇ ? ಎಂಬುದು. ಭಾಷೆಯಲ್ಲಿ ಎರಡು ವಿಧಗಳಿಲ್ಲ, ಎರಡು ದೃಷ್ಟಿಕೋನಗಳಿವೆ. ಈ ದೃಷ್ಟಿಕೋನಗಳಲ್ಲಿ ಪ್ರಧಾನವಾಗಿದ್ದನ್ನು ಗಂಡು ಭಾಷಿಕ ಗುಣವೆಂತಲೂ, ಅಧೀನವಾದದ್ದನ್ನು ಹೆಣ್ಣು ಭಾಷಿಕ ಗುಣಗಳೆಂತಲೂ ಪುರುಷ ದೃಷ್ಟಿಕೋನ ವಿಭಾಗಿಸಿ ಭಾಷೆಯನ್ನು 'ಗಂಡುಭಾಷೆ', 'ಹೆಣ್ಣುಭಾಷೆ' ಎಂದು ವಿಂಗಡಿಸಿ ಬಿಟ್ಟಿದೆ.

ಆದರೆ ಈ ವಿಂಗಡಣೆ ಅಷ್ಟು ಸಮಂಜಸವಲ್ಲ. ಸ್ತ್ರೀಭಾಷೆ, ಪುರುಷ ಭಾಷೆ ಎಂದು ಎರಡು ದೃವಗಳಲ್ಲಿ ಮಾನವರ ದೃಷ್ಟಿಕೋನ, ಸ್ವಭಾವಗಳನ್ನು ಒಡೆದಿಡುವುದೇ ವ್ಯವಸ್ಥೆಯ ಅಸಮರ್ಪಕ ಹಾಗೂ ಅಸಮಾನ ವಿಂಗಡಣೆ.

ಭಾಷೆ ಮಾನವರ ವಾಸ್ತವತೆಯ ಮೂಲಕ ಆಕಾರ ಪಡೆಯುತ್ತದೆ. ಅದು ಒಮ್ಮೆ ಅವಿನಾಭಾವದಲ್ಲಿ ಕಂಡರೆ ಮತ್ತೊಮ್ಮೆ ವಿಭಜಿತ ನೆಲೆಯಲ್ಲಿ ಗೋಚರಿಸುತ್ತದೆ. ಅವಿನಾಭಾವಕ್ಕಿಂತ ಹೆಚ್ಚು ವಿಭಜಿತ ನೆಲೆಯಲ್ಲೇ ನಮ್ಮ ಗ್ರಹಿಕೆ ನಡೆಯುತ್ತಿರುತ್ತದೆ. ಪುರುಷ ಕೇಂದ್ರಿತ ಸಮಾಜದಲ್ಲಿ ಅವನ ನೆಲೆಗೆ ಪೂರಕವಾಗಿ ಎಲ್ಲಾ ಮೌಲ್ಯಗಳು, ತತ್ವಗಳು, ಪುರಾಣಗಳು ಸೃಷ್ಟಿಯಾಗುತ್ತಾ ಬಂದು ಅವುಗಳೆಲ್ಲ ಭಾಷೆಯ ಮುಖಾಂತರ ಸಾಕಾರಗೊಂಡಿವೆ.

ಲಿಂಗತಾರತಮ್ಯದ ಈ ಭಾಷಿಕ ಸಂಕಥನವನ್ನು ತಿಳಿಯುವ ಮೊದಲು ಭಾಷೆಗೆ ಸಂಬಂಧಿಸಿದ ಕೆಲವು ಮೂಲಭೂತ ಅಂಶಗಳನ್ನು ಸ್ಪಷ್ಟಪಡಿಸಿಕೊಳ್ಳುವುದು ಸೂಕ್ತ.

## ಭಾಷಿಕ ರಚನೆ ಮತ್ತು ವ್ಯವಸ್ಥೆ

ಭಾಷೆ ಶಾಬ್ದಿಕ ಸಂಜ್ಞೆಗಳ ವ್ಯವಸ್ಥೆ, ಸಂಜ್ಞೆಗಳು ವಿಚಾರಗಳನ್ನು ವ್ಯಕ್ತಪಡಿಸಲು ನೆರವಾಗುವಂತೆ ವ್ಯವಸ್ಥೆಗೊಂಡಿರುವ ಸಂರಚನೆಯೇ ಭಾಷೆ. ಪ್ರತಿಯೊಂದು ಪದವು ಸಂಜ್ಞೆಯೇ. ಒಂದು ಪದದ ಅರ್ಥ ಸೂಚಿತ, ಸೂಚಕ, ಸೂಚನೆಗಳ ಮುಖಾಂತರ ಅರ್ಥಸಾಧ್ಯತೆಗಳನ್ನು ಪಡೆದುಕೊಳ್ಳುತ್ತದೆ.

| ಸಂಜ್ಞೆ | Sign |
|---|---|
| ಸೂಚಿತ (Signified) | ಪರಿಕಲ್ಪನೆ |
| ಸೂಚಕ (Signifier) | ಶ್ರವಣಬಿಂಬ |
| ಸೂಚನೆ (Signification) | ಅರ್ಥಗ್ರಹಿಕೆ |

ಸಂಜ್ಞೆಗಳು, ಸೂಚನೆಗಳ ಮುಖಾಂತರ ಅರ್ಥವನ್ನು ವ್ಯಕ್ತಪಡಿಸುವ ವಿಧಾನವೇ ಭಾಷೆ. 'ಹಾಲು'ಎಂಬ ಪದಕ್ಕು ಹಾಲಿಗೂ ಯಾವುದೇ ಸಂಬಂಧವಿಲ್ಲ. ಹಾಲು ಎಂಬ ಪರಿಕಲ್ಪನೆಯು ಹ್+ಆ+ಲ್+ಉ ಎಂಬ ಧ್ವನಿಸಂಕೇತಗಳ ಮುಖಾಂತರ 'ಹಾಲು' ಎಂಬ ಅರ್ಥಗ್ರಹಿಕೆಯ ನೆಲೆಗೆ ಸಾಗುತ್ತದೆ. ಅದೇ ರೀತಿ ಗಂಡು ಹೆಣ್ಣುಗಳಿಗೂ, ಸಾಂಸ್ಕೃತಿಕವಾಗಿ ರಚಿತವಾದ 'ಪುರುಷತ್ವ' ಮತ್ತು ' ಸ್ತ್ರೀತ್ವ'ದಕಲ್ಪನೆಗೂ ಯಾವುದೇ ಸಂಬಂಧವಿಲ್ಲ. ಅದು ಆ ಇಡೀ ಸಮುದಾಯ ಪ್ರತಿಪಾದಿಸಲ್ಪಟ್ಟ ಮೌಲ್ಯಗಳಿಂದ ಕಟ್ಟಲ್ಪಟ್ಟಿದ್ದು.

''ಭಾಷೆಯು ಒಂದು ರೂಪವೇ ಹೊರತು ವಸ್ತುವಲ್ಲ'' [೫] ಎಂದು ಸಸ್ಸೂರ್ ಹೇಳುತ್ತಾನೆ. ಪರಿಕಲ್ಪನೆಗಳನ್ನೇ ತೆಗೆದುಕೊಳ್ಳಲಿ ಅಥವಾ ಸೂಚಕ, ಸೂಚಿತಗಳನ್ನೇ ಪರಿಗಣಿಸಲಿ ಭಾಷೆಯಲ್ಲಿ ಇತ್ಯಾತ್ಮಕವೆಂದು ಕರೆಯಬಹುದಾದದ್ದು ಏನೂ ಇಲ್ಲ. ಭಾಷಾ ವ್ಯವಸ್ಥೆಯೊಳಗೆ ವ್ಯತ್ಯಾಸಗಳನ್ನು ಆಧರಿಸಿ ಹುಟ್ಟುವ ಸಂಬಂಧಗಳಿಂದ ಅರ್ಥ ಮೂಡುತ್ತದೆಯೇ ಹೊರತು ಭಾಷೆ ವ್ಯವಸ್ಥೆಯ ಆಚೆಗೆ ಅಥವಾ ಭಾಷಾ ವ್ಯವಸ್ಥೆಯ ಮುನ್ನ ಅರ್ಥವೆಂಬುದು ಇರಲು ಸಾಧ್ಯವಿಲ್ಲ. ಒಂದು ಪದದ ಅರ್ಥ ಏನೆಂದರೆ ಉಳಿದೆಲ್ಲ ಪದಗಳ ಅರ್ಥ ಏನಲ್ಲವೋ ಅದೇ. ಗಂಡು ಏನಲ್ಲವೋ ಅದುಹೆಣ್ಣು.

ಒಂದು ನಿರ್ದಿಷ್ಟ ಭಾಷಿಕ ವ್ಯವಸ್ಥೆಯಲ್ಲಿ ಮಾತ್ರ ನಿರ್ದಿಷ್ಟ ಅರ್ಥ ಸೂಚನೆ ಸಾಧ್ಯ. ಭಾಷಿಕ ಅರ್ಥ ಸಾಮಾಜಿಕವಾಗಿ, ಸಾಂಪ್ರದಾಯಿಕವಾಗಿ ನಿರ್ಧಾರಗೊಂಡಿರುತ್ತದೆ.

ಭಾಷೆಯೊಂದರ ಅರ್ಥಗಳು ಆ ಸಮುದಾಯದ ಸಿಂಬಲ್‌ಗಳೇ ಆಗಿರುತ್ತವೆ. ಆ ಇಡೀ ಸಮುದಾಯದ ಸುಪ್ತ ಚೇತನಗಳು ಸಂಜ್ಞೆಗಳಾಗಿ ಭಾಷೆಯಲ್ಲಿ ಅಂತಸ್ಥವಾಗಿರುತ್ತವೆ ವಿನಃ ಭಾಷೆಯು ಇಲ್ಲಿ ಅತ್ಯಂತ ನಿರ್ಲಿಪ್ತವಾದ ಮತ್ತು ತಾನೂ ಯಾವುದಕ್ಕೂ ಅಂಟಿಕೊಳ್ಳದಿರುವ ಒಂದು ವಸ್ತು ವ್ಯವಸ್ಥೆ ಮಾತ್ರ ಎನ್ನುವುದನ್ನು ಗಮನಿಸಬೇಕು.

ಭಾಷೆಯಲ್ಲಿ ಮೂಲತಃ ತಾರತಮ್ಯವಿರುವುದಿಲ್ಲ. ಅದು ರೂಢಿಯಿಂದ ರೂಢಿಗತವಾಗುತ್ತದೆ. ಸಾಮಾಜಿಕ ಸಂದರ್ಭದಲ್ಲಿರುವಂತಹ ತಾರತಮ್ಯ ಭಾಷಿಕ ಸಂದರ್ಭದಲ್ಲೂ ಕೂಡ ಉಂಟಾಗುತ್ತದೆ.

ಒಂದು ಸಮಾಜದ ಜನರ ಐಡಿಯಾಲಜಿಗಳು ಆ ಭಾಷೆಯ ಮೂಲಕ ವ್ಯಕ್ತವಾಗುತ್ತಾ ಇರುತ್ತವೆ. ಯಾವುದೋ ಒಂದು ಅನೂಹ್ಯ ಸುಪ್ತಪ್ರಜ್ಞೆಯಿಂದ ಭಾಷಾ ವ್ಯವಸ್ಥೆ ಉದ್ಭವವಾಗುವುದಿಲ್ಲ. ಅದರಲ್ಲೂ ಕೂಡ ಆ ಸಮುದಾಯದ ಪ್ರಧಾನವಾಹಿಯ ಪರಿಕಲ್ಪನೆಗಳಿಗೆ ಅನುಗುಣವಾಗಿ ಭಾಷೆ ಸಂರಚಿತಗೊಳ್ಳುತ್ತಿರುತ್ತದೆ. ಇದೊಂದು 'ಭಾಷಿಕ ಸಂಕಥನ'. ಜಾಕೋಬ್ಸನ್ ''ಭಾಷೆಯ ಹಲವಾರು ಕಾರ್ಯಗಳಲ್ಲಿ ಸಮಾಜ ಯಾವುದಕ್ಕೆ ಪ್ರಾಮುಖ್ಯತೆ ನೀಡುತ್ತದೆ ಎಂಬುದರಿಂದಲೇ ಅರ್ಥದ ಕಲ್ಪನೆಗಳು ಮೂಡುತ್ತವೆ.''[೬] ಎನ್ನುತ್ತಾನೆ.

ಯಾವುದೇ ನಿರ್ದಿಷ್ಟ ಅರ್ಥ ಹೊಂದಿರದ ಭಾಷೆ ಹೇಗೆ ಪುರುಷ ಸ್ಥಾನೀಯವಾಯಿತು? ಎಂಬುದನ್ನು ಪರಿಶೀಲಿಸಲು ಡೇಲಿ ಸ್ಪೆಂಡರ್ ಎಂಬ ಪಾಶ್ಚಾತ್ಯ ಚಿಂತಕನ "Language is a man made" [೭] ಎಂಬ ಮಾತನ್ನು ಚರ್ಚೆಗೆ ತೆಗೆದುಕೊಳ್ಳುವುದಾದರೆ ಭಾಷೆ ಒಂದು ನೈಸರ್ಗಿಕವಾಗಿ ಉಂಟಾದ ಮಾಧ್ಯಮವಾದರೂ ಅದರಲ್ಲಿ ಪುರುಷ ಯಜಮಾನೀಯ ದೃಷ್ಟಿಕೋನವಿದೆ. ಆದ್ದರಿಂದ ಭಾಷೆಯ ರಚಿತರೂಪವೇ ಪುರುಷ ಮೂಲೀಯವಾದದ್ದು. ಭಾಷೆಯ ಪ್ರತಿಯೊಂದು ರಾಚನಿಕ ಹಂತವೂ ಹಾಗೂ ಶಾಬ್ದಿಕ ಬಳಕೆಯೂ ಕೂಡ ಪುರುಷ ಕೇಂದ್ರಿತವಾದದ್ದು ಮತ್ತು ಪುರುಷನಿಗೆ ಪ್ರಾಧಾನ್ಯತೆಯನ್ನು ಕೊಡುವಂತಹುದಾಗಿದೆ. ಆದ್ದರಿಂದ ಭಾಷೆ ಪುರುಷ ರೂಪಿತವಾದದ್ದು ಎಂಬ ಅಭಿಪ್ರಾಯವನ್ನು ಈತ ವ್ಯಕ್ತಪಡಿಸುತ್ತಾನೆ.

ಹಾಗಾದರೆ ಭಾಷೆಯ ರಚನೆಯಲ್ಲಿ ಸ್ತ್ರೀಯರ ಪಾತ್ರ ಏಕೆ ಗೌಣವಾಗಿದೆ ? ಸ್ತ್ರೀಯರಿಗೆ ಏಕೆ ಭಾಷೆಯಲ್ಲಿ ಅಸ್ಥಿತ್ವ ಉಂಟಾಗಿಲ್ಲ ? ಪುರುಷನ ಮುಖಾಂತರವೇ ಮಹಿಳೆಯ ಗುರುತಿಸುವಿಕೆಗೆ ಕಾರಣಗಳೇನು ? ಎಂಬ ಪ್ರಶ್ನೆಗಳನ್ನು ಒಂದು ರೇಖಾಚಿತ್ರದ ಮುಖಾಂತರ ಸ್ಪಷ್ಟಪಡಿಸಿಕೊಳ್ಳುವುದಾದರೆ,




ರೇಖಾಚಿತ್ರದ ಪ್ರಕಾರ ಸೃಷ್ಟಿಯ ಪ್ರಾರಂಭಿಕ ಹಂತದಲ್ಲಿ ಗಂಡು- ಹೆಣ್ಣು ಸಮಾನ ನೆಲೆಯಲ್ಲಿರುತ್ತಾರೆ. ಆದರೆ ವ್ಯವಸ್ಥೆ ಪುರುಷ ಪ್ರಾಧಾನ್ಯವಾಗುತ್ತಾ ಹೋದಂತೆಲ್ಲ ಅವನ ಆಲೋಚನೆ, ಅಭಿಪ್ರಾಯಗಳಿಗೆ ಪ್ರಾಮುಖ್ಯತೆ ದೊರೆಯುತ್ತದೆ. ಅಲ್ಲದೆ ಸಮಾಜದ ಪ್ರಮುಖಕಾರ್ಯ ಚಟುವಟಿಕೆಗಳಲ್ಲಿ ಪುರುಷನ ಪಾತ್ರವೇ ಪ್ರಧಾನವಾಗಿರುತ್ತದೆ. ಉದಾಹರಣೆಗೆ ಯುದ್ಧ, ಕ್ರೀಡೆ, ಈಜು, ಆಡಳಿತ, ಕಲೆ, ಸಾಹಿತ್ಯ ಹೀಗೆ ಎಲ್ಲಾ ಕ್ಷೇತ್ರಗಳಲ್ಲಿಯೂ ಅವನ ಪಾಲುಗೊಳ್ಳುವಿಕೆಯೇ ಹೆಚ್ಚಾಗಿರುತ್ತದೆ. ಆಗ ಭಾಷೆಯ ನಿರ್ಮಾಣ ಮತ್ತು ನಿರ್ವಹಣೆಯ ಹೊಣೆ ಅವನದೇ ಆಗಿರುತ್ತದೆ.

ಇಲ್ಲಿ ಹೆಣ್ಣಿನ ಪಾತ್ರ ಗೌಣವಾಗಿರುತ್ತದೆ. ಏಕೆಂದರೆ ಪ್ರಮುಖ ಸಾಮಾಜಿಕ ಚಟುವಟಿಕೆಗಳಲ್ಲಿ ಅವಳ ಭಾಗವಹಿಸುವಿಕೆಯ ಪ್ರಮಾಣ ಕಡಿಮೆಯಾಗಿರುತ್ತದೆ. ಆಗ ಪುರುಷ ಮೂಲದಿಂದ ಸೃಷ್ಟಿಯಾಗಿ, ಅವನಿಂದಲೇ ಆವರ್ತನಕ್ಕೊಳಪಡುವ ಭಾಷೆಯ ಸಂರಚನೆಯೊಳಗೆ ಸ್ತ್ರೀ ಸ್ಥಾನವಿರುತ್ತದೆಯೇ ವಿನಃ ಅವಳಿಗೆ ಭಾಷಿಕವಾಗಿ ಪ್ರತ್ಯೇಕ ಅಸ್ಥಿತ್ವ ಉಂಟಾಗುವುದಿಲ್ಲ. ರೇಖಾಚಿತ್ರದಲ್ಲಿ ತೋರಿಸಿರುವಂತೆ ಹೆಣ್ಣು ಭಾಷೆಯ ಸೃಷ್ಟಿಕ್ರಿಯೆಯಲ್ಲಿ ಅಧೀನ ನೆಲೆಯಲ್ಲಿದ್ದಾಳೆ ಹಾಗೂ ಸಾಮಾಜಿಕವಾಗಿ ಆವರ್ತನಗೊಳ್ಳುವ

ಭಾಷೆಗೂ ಅವಳಿಗೂ ನೇರ ಸಂಬಂಧವಿಲ್ಲ. ಆದ್ದರಿಂದ ಹೆಣ್ಣಿನ ಅಸ್ಥಿತ್ವ ಸಮಾಜದಲ್ಲಿ ಕೆಳಸ್ತರದಲ್ಲಿದ್ದಂತೆ ಭಾಷಿಕವಾಗಿಯೂ ಪುರುಷನ ಮುಖಾಂತರವೇ ಗುರುತಿಸಲ್ಪಡುತ್ತಾಳೆ.

ಇಂತಹ ವ್ಯವಸ್ಥೆಯೊಳಗೆ ಸಾಮಾಜಿಕ ಪಾತ್ರಗಳನ್ನು ನಿರ್ಧರಿಸುವ ಸಂಗತಿಗಳು ಕೂಡಾ ಪುರುಷರನ್ನೇ ಮಾನದಂಡವನ್ನಾಗಿಟ್ಟುಕೊಂಡಿರುತ್ತದೆ. ಉದಾಹರಣೆಗೆ ದೇವರು ವ್ಯಕ್ತಿ ಮುಂತಾದ ಶಬ್ಧಗಳು ಮೂಲತಃ ಪುರುಷ ವಾಚಕಗಳು. ಇಂತಹ ಪದಗಳ ಬಳಕೆಯ ಒಳಗೆ ಸ್ತ್ರೀಯೂ ಸೇರಿರುತ್ತಾಳೆ ಎಂಬಂತೆಯೇ ಒಂದು ಗ್ರಹಿಕೆ ಸದಾ ಕೆಲಸ ಮಾಡುತ್ತಿರುತ್ತವೆ. ಶಬ್ಧಗಳು ಒಂದು ಭಾಷೆಯಲ್ಲಿ ರೂಪುಗೊಂಡಿರುವ ರೀತಿಗೂ, ಆ ಭಾಷೆಯನ್ನು ಸೃಷ್ಟಿಸಿದ ಜನಾಂಗದ ಸಾಂಸ್ಕೃತಿಕ ಚಿಂತನೆಯ ಸ್ವರೂಪಕ್ಕೂ ನಿಕಟ ಸಂಬಂಧ ಇರುತ್ತದೆ. ಇದೊಂದು ಭಾಷಿಕ ಸಂಕಥನ. ಇದನ್ನು ಸ್ತ್ರೀ ಪುರುಷ ಇಬ್ಬರೂ ಸೇರಿದಂತೆ ಇಡೀ ಸಮುದಾಯವೇ ಅಪ್ರಜ್ಞಾಪೂರ್ವಕವಾಗಿ ಒಪ್ಪಿಕೊಂಡು ಬಿಟ್ಟಿರುತ್ತದೆ.ಹಾಗೂ ತನ್ನದನ್ನಾಗಿಸಿಕೊಂಡು ಬಿಟ್ಟಿರುತ್ತದೆ.

**ಭಾಷೆಯಲ್ಲಿನ ದ್ವಿಮಾನದ ಪರಿಕಲ್ಪನೆ ಪ್ರಾರಂಭವಾಗುವುದು ಹೇಗೆ ? ಮತ್ತು ಯಾವಾಗ ?**

ಭಾಷೆಯಲ್ಲಿ ಗಂಡುತನ ಮತ್ತು ಹೆಣ್ಣುತನ ಎಂಬ ದ್ವಿಮಾನದ ಕಲ್ಪನೆ ಯಾವಾಗ ಮೂಡಬಹುದು ಎಂಬ ವಿಚಾರದತ್ತ ಗಮನ ಹರಿಸುವುದಾದರೆ ಎರಡು ಸ್ಥಿತಿಗಳಲ್ಲಿನ ಭಾಷೆಯ ಸಂರಚನೆಯನ್ನು ಕುರಿತು ವಿಚಾರ ಮಾಡಬಹುದು.

೧. ಭಾಷಾ ಪೂರ್ವಸ್ಥಿತಿ

೨. ಭಾಷಿಕ ಸ್ಥಿತಿ

ಮನುಷ್ಯನಿಗೆ ಎಷ್ಟೋ ಶತಮಾನಗಳ ಕಾಲ ತನಗೆ ಮಾತನಾಡುವ ಸಾಮರ್ಥ್ಯವಿದೆ ಎಂಬ ಕಲ್ಪನೆ ಕೂಡ ಇರಲಿಲ್ಲ. ಆಗಲೂ ಕೂಡ ಪರಸ್ಪರ ಅಶಾಬ್ಧಿಕ ಸಂವಹನ ಕ್ರಿಯೆ ಸಾಧ್ಯವಾಗುತ್ತಿತ್ತು. ಭಾಷೆಯಗೊಡವೆಯೇ ಇಲ್ಲದೆ ಆಲೋಚನೆಗಳು ಸಾಧ್ಯವಾಗಿದ್ದವು.

ಉದಾಹರಣೆಗೆ ಭಾವಗಳನ್ನು ಅನುಭವಿಸಿ ನಾವು ಅದಕ್ಕೆ ಸಂಜ್ಞೆಗಳ ಮೂಲಕ ಪ್ರತಿಕ್ರಿಯಿಸುತ್ತೇವೆ. ಆಯಾ ಭಾವಗಳಿಗೆ ಈ ಭಾಷಿಕ ಪ್ರತಿಕ್ರಿಯೆಗಳು ಸೂಚಕಗಳು ಮಾತ್ರ. ಅಂದರೆ ಮನಸ್ಸಿನ ಭಾವಗಳು ಮೂಲಭೂತವಾಗಿ ಭಾಷೆಗೆ ಅತೀತವಾದವುಗಳು. ಅದರ

ವ್ಯಾಪ್ತಿಗೆ ಹೊರತಾಗಿರುತ್ತವೆ. ಅನಂತರದ ಕಾಲದಲ್ಲಿ ಮನುಷ್ಯರ ಭಾವನೆ ಆಲೋಚನೆಗಳು ಮಾತಿನ ರೂಪ ಪಡೆದುಕೊಂಡವು. ಭಾವಗಳಿಗು ಅವು ಉಂಟಾದಾಗ ನಾವು ತೋರಿಸುವ ಭಾಷಿಕ ಪ್ರತಿಕ್ರಿಯೆಗೂ ಇರುವ ಸಂಬಂಧವನ್ನು ವಿವರಿಸಲು ಸಾಧ್ಯವಾಗದು. ಒಟ್ಟಾರೆ ಭಾಷೆ, ಭಾಷಿಕರ ಭಾವನೆ, ಆಲೋಚನೆಗಳನ್ನು ಸಂಪೂರ್ಣವಾಗಿ ನಿಯಂತ್ರಿಸುತ್ತದೆಂದು ಒಪ್ಪದಿದ್ದರೂ ಅವುಗಳನ್ನು ಪ್ರಭಾವಿಸುತ್ತದೆಂದು ಒಪ್ಪಬಹುದು.

ಮಗು ಭಾಷೆಯನ್ನು ಕಲಿಯುವಾಗಲೇ ಅದರಲ್ಲಿ ಜಗತ್ತನ್ನು ಕುರಿತ ಪರಿಕಲ್ಪನೆಗಳು ನಿಯಂತ್ರಿತವಾಗಿ ಆಕಾರ ತಳೆಯುತ್ತವೆ. ಆದ್ದರಿಂದ ಅದರ ಆಲೋಚನಾ ಕ್ರಮವೆಲ್ಲ ಆ ಭಾಷೆಯಿಂದಲೇ ನಿರ್ದೇಶಿತವಾಗುತ್ತದೆ. ಲೋಕವನ್ನು ಗ್ರಹಿಸಲು ಸೂತ್ರಗಳನ್ನು ಒದಗಿಸುವ ಈ ನಿಯಮಗಳಿಗೆ ಅನುಗುಣವಾಗಿಯೇ ನಾವು ಎಲ್ಲವನ್ನು ಅರಿಯುತ್ತೇವೆ, ಪರಿಕಲ್ಪನೆಗಳನ್ನು ರೂಪಿಸಿಕೊಳ್ಳುತ್ತೇವೆ. ಆ ಪರಿಕಲ್ಪನೆಗಳಿಗೆ ಮಹತ್ವವನ್ನು ಪ್ರಧಾನ ಮಾಡಿಕೊಳ್ಳುತ್ತೇವೆ. ಭಾಷಾ ಸಮುದಾಯದಲ್ಲಿರುವ ಈ ಒಪ್ಪಂದ ಲಿಖಿತವಲ್ಲ. ಆದರೆ ಅದನ್ನು ಅನುಸರಿಸಲೇಬೇಕು, ಅನುಸರಿಸುತ್ತೇವೆ.

ಜ್ಯುಲಿಯಾ ಕ್ರಿಸ್ಟೇನಾ ಎಂಬ ಫ್ರೆಂಚ್ ವಿಮರ್ಶಕಿ ಭಾಷಾ ಪೂರ್ವದ ಅವ್ಯವಸ್ಥಿತ ಸೂಚನಾ ಪ್ರಕ್ರಿಯೆಯನ್ನು ಗುರುತಿಸುತ್ತಾಳೆ. ಮಗುವಿನ ಬೆಳವಣಿಗೆಯ ಪ್ರಾರಂಭಿಕ ಹಂತದಲ್ಲಿ ನಡೆಯುವ ಈ ಪ್ರಕ್ರಿಯೆಯ ಕೇಂದ್ರದಲ್ಲಿ ತಾಯಿ ಇರುತ್ತಾಳೆ. ತಾಯಿ ಕೇಂದ್ರಿತವಾದ ಈ ಭಾಷೆ 'ಸಿಮಿಯಾಟಿಕ್' ಆದದ್ದು ಅಥವಾ ಸೂಚಕ'ಪ್ರಧಾನವಾದದ್ದು. ತಾಯಿಯ ಭಾಷೆ ಪಿತೃಪ್ರಧಾನ ಭಾಷೆಯೇ ಆಗಿದ್ದಾಗ ಮಗುವಿನ ಭಾಷೆ ಕೂಡ ಅದೇ ಆಗುತ್ತದೆ. ಕ್ರಮೇಣ ಈ ಸೂಚಕ ಪ್ರಧಾನವಾದ ಭಾಷೆ ದಮನಕ್ಕೆ ಒಳಗಾಗಿ ತಂದೆ ಕೇಂದ್ರಿತವಾದ, ತಂದೆಯಿಂದ ನಿಯಂತ್ರಿತವಾದ ವ್ಯಾಕರಣ ಮತ್ತು ತರ್ಕಬಬದ್ಧವಾದ ಭಾಷೆಯ ಅಧಿಪತ್ಯ ಶುರುವಾಗುತ್ತದೆ. ಈ ಭಾಷೆಯನ್ನು ಆಕೆ 'ಸಿಂಬಾಲಿಕ್' ಆದದ್ದು ಅಥವಾ 'ಸಂಕೇತ' ಪ್ರಧಾನವಾದದ್ದು ಎಂದು ಗುರುತಿಸುತ್ತಾಳೆ. ನಮ್ಮ ಎಲ್ಲಾ ಅಂಗೀಕೃತ ಸಂಕಥನಗಳು ತಂದೆ ಭಾಷೆಯಿಂದ ನಿಯಂತ್ರಿತವಾದವುಗಳು.

ಶೈಶವಾವಸ್ಥೆಯ ಅವ್ಯವಸ್ಥಿತ ಭಾಷಾ ಪೂರ್ವ ವಾಕ್ ಪ್ರವಾಹದ ಚಲನೆಗಳೂ, ಆಂಗಿಕ ಸನ್ನೆಗಳು, ಸದ್ದು ಮುಂತಾದವು ಪ್ರೌಢಾವಸ್ಥೆಯ ಪರಿಪಕ್ವ ಭಾಷಿಕ

ಪ್ರಯತ್ನದಡಿಯಲ್ಲಿ ಸುಪ್ತವಾಗಿ ಕ್ರಿಯಾಶೀಲವಾಗಿ ಇರುತ್ತವೆ. ಈ ಬಗೆಯ ಭಾಷಿಕ ಸಾಮಗ್ರಿಯನ್ನು ಕ್ರಿಸ್ಟೇವಾ 'ಶಬ್ದಾರ್ಥ' ಸ್ವರೂಪದ್ದೆಂದು ಪರಿಗಣಿಸುತ್ತಾಳೆ.[೮] ಅದು ಅವ್ಯವಸ್ಥಿತ ಅರ್ಥ ಸೂಚಕ ಕ್ರಿಯೆಯನ್ನು ಹೋಲುತ್ತದೆ.

ಶೈಶವ ಹಂತದ ಅವ್ಯವಸ್ಥಿತ 'ಶಬ್ದಾರ್ಥ' ಸ್ವರೂಪವು ಕ್ರಮವಾಗಿ ವ್ಯವಸ್ಥೆಗೊಂಡತೆಲ್ಲ ವಾಕ್ಯ ರಚನೆಯು ತರ್ಕಬದ್ಧವೂ, ಸುಸಂಗತವೂ ಆಗುತ್ತದೆ. ಈ ಹಂತದ ವೈಚಾರಿಕತೆಯನ್ನು ಕ್ರಿಸ್ಟೇವಾ 'ಸಂಕೇತಾತ್ಮಕತೆ' ಎಂದು ಗುರುತಿಸುತ್ತಾಳೆ. ಶಬ್ದಾರ್ಥದ ಜೊತೆ ಸಂಕೇತಾತ್ಮಕತೆಯು ಕೆಲಸ ಮಾಡುತ್ತಾ, ಸಂಕೇತಾತ್ಮಕತೆಯು ಶಬ್ದಾರ್ಥದ ಮೇಲೆ ಕೌಶಲ್ಯ ಪೂರ್ಣವಾಗಿ ಅಧಿಕಾರವನ್ನು ಸ್ಥಾಪಿಸುತ್ತದೆ. ಈ ಸಂಕೇತಾತ್ಮಕತೆಯು ತನಗೆ ತಾನೇ ಸ್ವಂತ ಸೂಚಕ ಗುಣವನ್ನು ಉತ್ಪಾದಿಸಲಾರದು. ಮಾತಾಡುವವನನ್ನು ಹಾಗೂ ಕೇಳುವವರನ್ನು ಅವರವರ ಸ್ಥಾನದಲ್ಲಿರಿಸಿ ಅವು ತಮ್ಮದೇ ಗುರುತನ್ನು ಪಡೆಯಲು ಸಂಕೇತಾತ್ಮಕತೆಯು ಸಹಾಯ ಮಾಡುತ್ತದೆ. ಈ ಹಂತದಲ್ಲಿ ಪುರುಷ ಪ್ರಧಾನ ಸಮಾಜದಲ್ಲಿ ಗಂಡು ಹೇಳುವವನಾಗಿ ಮೇಲ್‌ಸ್ತರದಲ್ಲಿದ್ದರೆ ಹೆಣ್ಣು ಕೇಳುವವಳಾಗಿ ಕೆಳಸ್ತರದಲ್ಲಿರುತ್ತಾಳೆ. ಅವನು ಸಬ್ಜೆಕ್ಟ್, ಅವಳು ಆಬ್ಜೆಕ್ಟ್.

ಕ್ರಿಸ್ಟೇವಾ ನಿರೂಪಿಸುವ ಈ 'ಶಬ್ದಾರ್ಥ' ಮತ್ತು ಸಂಕೇತಾತ್ಮಕತೆಗಳ ಸ್ವರೂಪಕ್ಕೆ ಸಂವಾದಿಯಾಗಿ ಲಕಾನ್‌ನ 'ಪ್ರತಿಮಾತ್ಮಕತೆ' (Imaginary) ಮತ್ತು 'ಪ್ರತೀಕಾತ್ಮಕತೆ' ( Symbalic) ಯ ಪರಿಕಲ್ಪನೆಯನ್ನು ಚರ್ಚೆಗೆ ತೆಗೆದುಕೊಳ್ಳಬಹುದು.

1. ಭಾಷಾ ಪೂರ್ವಸ್ಥಿತಿ - ಪ್ರತಿಮಾತ್ಮಕತೆ (ಕಾಲ್ಪನಿಕ)
2. ಭಾಷಿಕ ಸ್ಥಿತಿ - ಪ್ರತೀಕಾತ್ಮಕತೆ ( ಸಾಂಕೇತಿಕ)[೯]

ಪ್ರತಿಮಾತ್ಮಕತೆಯ ಸ್ಥಿತಿಯಲ್ಲಿ ಜ್ಞಾತೃ ಮತ್ತು ಜ್ಞೇಯಗಳ ನಡುವೆ ಸ್ಪಷ್ಟ ವ್ಯತ್ಯಾಸವಿರುವುದಿಲ್ಲ. ಆ ವ್ಯತ್ಯಾಸವನ್ನು ಕಲ್ಪಿಸುವ ಕೇಂದ್ರ 'ಸ್ವ' ತ್ವವೂ ಇರುವುದಿಲ್ಲ. ಭಾಷಾ ಪೂರ್ವದ ಘಟ್ಟದಲ್ಲಿ ಮಗುವಿನ ಸ್ವ-ಪ್ರತಿಮೆಯು ತುಂಡು ತುಂಡಾಗಿರುತ್ತದೆ. ಕ್ರಮೇಣ ಅದು ತನ್ನನ್ನು ತಾನು ಸಮಗ್ರವೆಂದು ನೋಡಿಕೊಳ್ಳಲಾರಂಭಿಸುತ್ತದೆ. ಆ ಮೂಲಕ ಕಾಲ್ಪನಿಕ ಆದರ್ಶವಾದ 'ಅಹಂ' ಉತ್ಪಾದಿತವಾಗುತ್ತದೆ. ಈ ಬಗೆಯ ದರ್ಶನಾತ್ಮಕ ಪ್ರತಿಮೆಯು ಆಂಶಿಕವಾಗಿ ಪ್ರತೀಕಾತ್ಮಕವಾಗುಳಿಯುತ್ತದೆ. ಹಾಗೂ

ಆಂಶಿಕವಾಗಿ ತಾನು 'ಬೇರೆ'ಎನ್ನುವುದು ಅರಿವಿಗೆ ಬರುತ್ತದೆ. ತನ್ನನ್ನು ತಾನು ಸಮಗ್ರ, ಏಕೀಕೃತ, ಸ್ವ ಎಂಬ ತಿಳುವಳಿಕೆಯೂ ತನ್ನಿಂದ ಹೊರತಾದ ಅನ್ಯದ ಕಲ್ಪನೆಯ ಮೇಲೆಯೇ ಆಧಾರಿತವಾದುದಾಗಿರುತ್ತದೆ. ಮಗುವು 'ಅನ್ಯ ' ರಿಂದ ತನ್ನನ್ನು ಭಿನ್ನವಾಗಿ ಗುರುತಿಸಿಕೊಳ್ಳಲು ಕಲಿಯುತ್ತದೆ. ತಂದೆಯು ವಿಧಿಸಿದ ನಿಷೇಧದೊಂದಿಗೆ ಮಗುವು ಪ್ರತೀಕಾತ್ಮಕ ಜಗತ್ತಿನಲ್ಲಿ ಬಂದು ಬೀಳುತ್ತದೆ. ಈ ಜಗತ್ತು ಗಂಡು/ ಹೆಣ್ಣು, ಮೇಲು/ ಕೀಳು ಇತ್ಯಾದಿ ವೈರುಧ್ಯಗಳನ್ನು ಒಳಗೊಂಡಿರುತ್ತದೆ.

ಒಂದು ಸಲ ಜ್ಞಾತೃವು ಭಾಷೆಯ ಪ್ರತೀಕಾತ್ಮಕ ವ್ಯವಸ್ಥೆಯೊಳಗೆ ಪ್ರವೇಶಿಸಿದ ಕೂಡಲೇ ಲಿಂಗ ವ್ಯವಸ್ಥೆಯೊಳಗಿನ ಸಂಬಂಧಗಳಲ್ಲಿ ನಿರ್ದಿಷ್ಟ ಸ್ಥಾನವನ್ನು ಪಡೆಯುತ್ತಾನೆ/ಳೆ. ಸೂಚಕಕ್ಕೂ, ಸೂಚಿತಕ್ಕೂ ಸಂಬಂಧವಾಗಲೇ ಏರ್ಪಟ್ಟಿಸುತ್ತದೆ. ಸೂಚಿತವು ಸೂಚಕದ ಕೆಳಗೆ ಜರುಗಿಹೋಗಿ ಕೂತು ಸೂಚಕವು ಎದ್ದುಕಾಣುವಂತೆ ಮಾಡುತ್ತದೆ.

ಫ್ರಾಯ್ಡ್ ಮತ್ತು ಫ್ರಾಯ್ಡೋತ್ತರ ಚಿಂತನೆಗಳ ಪ್ರಕಾರ ಲಿಂಗ ವ್ಯವಸ್ಥೆಯು ಮೂಲಭೂತವಾಗಿ ಭಾಷೆಯ ಕಲಿಕೆಯ ಮೂಲಕ ರೂಪುಗೊಳ್ಳುತ್ತದೆ. ಮಗುವು ಮಾತನಾಡುವ ಪಿತೃ ಪ್ರಧಾನ ವ್ಯವಸ್ಥೆಯ ತಂದೆಯ ಕಾನೂನಿನಿಂದ ರೂಪಿತವಾದ ಸಂಕೇತ ವ್ಯವಸ್ಥೆಯನ್ನು ಪ್ರವೇಶಿಸಲೇಬೇಕು. ಫ್ರಾಯ್ಡ್‌ನ ಆಲೋಚನೆಯಂತೆ '' ಲಿಂಗ ಪ್ರಜ್ಞೆಯ ನಿಯಂತ್ರಣದಲ್ಲಿ ಭಾಷಾ ಬಳಕೆಯು ರೂಪುಗೊಳ್ಳುತ್ತದೆ. ಪಿತೃ ಪ್ರಧಾನ ಸಂಕೇತ ವ್ಯವಸ್ಥೆ ಹಾಗೂ ಲಿಂಗ ಪ್ರಜ್ಞೆಯ ನಿಯಂತ್ರಣಗಳೆರಡು ಸೇರಿ 'ಅವನು' ಮತ್ತು 'ಅವಳು' ಕುರಿತ ಕಲ್ಪನೆಯನ್ನು ಭಾಷಿಕ ನೆಲೆಯಲ್ಲಿ ಸೃಷ್ಟಿಮಾಡುತ್ತವೆ.'' [೧೦]

ಇಂಥ ಭಾಷಿಕ ವ್ಯವಸ್ಥೆಯಲ್ಲಿ ವ್ಯವಹರಿಸುತ್ತಾ 'ವ್ಯಕ್ತಿ' ಲಿಂಗ ವ್ಯವಸ್ಥೆಯೊಳಗೆ ತನ್ನನ್ನು ಬದ್ಧಗೊಳಿಸಿಕೊಳ್ಳುತ್ತಾನೆ/ಳೆ. ಹೀಗಾಗಿ ಭಾಷಿಕ ವ್ಯವಸ್ಥೆಯನ್ನು ವಿರಚನೆಗೊಳಿಸುವುದೆಂದರೆ ಲಿಂಗ ವ್ಯವಸ್ಥೆಯನ್ನು ವಿರಚಿಸುವುದು. ಭಾಷಿಕ ಸಂಕೇತ ವ್ಯವಸ್ಥೆಯನ್ನು ಬುಡಮೇಲು ಮಾಡುವುದೆಂದರೆ ಲಿಂಗ ವ್ಯತ್ಯಾಸವನ್ನು ಬುಡಮೇಲು ಮಾಡುವುದು ಎಂದರ್ಥ. ಆದರೆ ಈ ಮಾತು ವಾಸ್ತವದಲ್ಲಿ ಸಾಕಾರಗೊಳ್ಳುವುದು ಅಷ್ಟು ಸುಲಭದ ಮಾತಲ್ಲ.

**ಪುಲ್ಲಿಂಗಾಂಕಿತಗಳು**

ವ್ಯವಸ್ಥೆಯನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಂಡಿರುವ ಪುರುಷ ಪ್ರತಿಯೊಂದು ಅಂಶವನ್ನು ತನ್ನ ದೃಷ್ಟಿಕೋನದಿಂದಲೇ ತನಗೆ ಅನುಗುಣವಾಗಿಯೇ ಸೃಷ್ಟಿಸಿಕೊಳ್ಳುತ್ತಾನೆ. ಅದೇ ರೀತಿ ಭಾಷೆಯ ರಚಿತ ರೂಪವೂ ಕೂಡ ಪುರುಷ ಪ್ರಧಾನವಾದುದೆ ಆಗಿದೆ. ಪುರುಷ ಸಂಬಂಧದೊಂದಿಗೆ ಹುಟ್ಟಿರುವ ಭಾಷೆಯೂ ಪುರುಷಾಧಿಕಾರವನ್ನು ನಿರಂತರವಾಗಿ ಉಳಿಸಿಡುವ ವಾಹಕವೂ ಆಗಿದೆ.

ಭಾಷೆಯಲ್ಲಿನ ಸಂಕೇತಾರ್ಥಗಳು ಏಕಲಿಂಗಾತ್ಮಕವಾಗಿಯೇ ರೂಪು ತಾಳಿರುವುದರಿಂದ ಇಡೀ ಭಾಷಿಕ ವ್ಯವಸ್ಥೆಯನ್ನೇ ಪುರುಷ ಲಿಂಗಾಂಕಿತ ವ್ಯವಸ್ಥೆ ಎಂದು ಹೇಳಬಹುದು. ಅದಕ್ಕೆ ಪೂರಕವಾಗಿ ವ್ಯಾಕರಣವೂ ಕೂಡ ಪುರುಷ ಮೂಲೀಯವಾಗಿಯೆ ರಚಿತವಾಗಿದೆ. ಇದನ್ನು ಕೆಲವು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಿಕೊಳ್ಳುವುದಾದರೆ,

**ನಾಮಪದಗಳಲ್ಲಿ ಲಿಂಗ ಸೂಚನೆ**

ನಾಮಪದವು ಲಿಂಗ, ವಚನ, ವಿಭಕ್ತಿಗಳ ಕಾರಣದಿಂದ ರೂಪಾಂತರವನ್ನು ಹೊಂದುತ್ತದೆ. ಕನ್ನಡ ಭಾಷೆಯ ಲಿಂಗವ್ಯವಸ್ಥೆ ಅರ್ಥಾನುಸಾರಿಯಾದುದು. ಇಲ್ಲಿ ಲಿಂಗ ನಿರ್ಧಾರವಾಗುವುದು ಅವುಗಳ ರೂಪಕ್ಕೆ ಅನುಗುಣವಾಗಿ ಅಲ್ಲ. ಅರ್ಥಕ್ಕೆ ಅನುಗುಣವಾಗಿ ಅಲ್ಲದೆ ವಾಕ್ಯದ ಕೊನೆಯಲ್ಲಿ ಬರುವ ಕ್ರಿಯಾಪದಗಳಿಂದ ಲಿಂಗ ನಿರ್ಧಾರವಾಗುತ್ತದೆ.

ಉದಾ : ೧. ಸೂರ್ಯ ಹುಟ್ಟಿದನು

೨. ಸೂರ್ಯ ಹುಟ್ಟಿತು.

ಮೊದಲನೆಯ ಉದಾಹರಣೆಯಲ್ಲಿ ಸೂರ್ಯ ಪುಲ್ಲಿಂಗವಾದರೆ, ಎರಡನೇ ಉದಾಹರಣೆಯಲ್ಲಿ ಸೂರ್ಯ ನಪುಂಸಕಲಿಂಗವಾಗಿದೆ. ಸೂರ್ಯ ಎಂಬ ನಾಮಪದಕ್ಕೆ ಯಾವ ಲಿಂಗವೂ ಇಲ್ಲ. ಆದರೆ ಅದರ ಮುಂದಿನ ಕ್ರಿಯಾಪದಾನುಸಾರಿಯಾಗಿ ಪುಲ್ಲಿಂಗ, ನಂಪುಂಸಕಲಿಂಗದಗ ಅರ್ಥ ಸ್ಪಷ್ಟವಾಗುತ್ತದೆ. ಕ್ರಿಯಾಪದವನ್ನು ಹೊರತು ಪಡಿಸಿದರೆ ಆ ಸಮುದಾಯದ ಭಾಷಿಕ ಗ್ರಹಿಕೆಯಲ್ಲಿ ಸೂರ್ಯ ಪುಲ್ಲಿಂಗವೇ ಆಗುತ್ತಾನೆ. ಎಂದಿಗೂ ಸ್ತ್ರೀಲಿಂಗವಾಗುವುದಿಲ್ಲ.

ವೃತ್ತಿವಾಚಕ ನಾಮಪದಗಳು, ಜಾತಿವಾಚಕ ನಾಮಪದಗಳು ಹಾಗೂ ಅನ್ವರ್ಥನಾಮಗಳು ಕೂಡ ಮೂಲದಲ್ಲಿ ಪುರುಷ ವಾಚಕಗಳೇ ಆಗಿದ್ದವು. ಉದಾಹರಣೆಗೆ

೧. ವೃತ್ತಿವಾಚಕ ನಾಮಪದಗಳು

೧. ಕುಂಬಾರ
೨. ಗಾಣಿಗ
೩. ನಿರ್ದೇಶಕ
೪. ಪ್ರಾಧ್ಯಾಪಕ
೫. ವಕೀಲ
೬. ರಾಜ್ಯಪಾಲ
೭. ವೈದ್ಯ

೨. ಜಾತಿ ವಾಚಕ ನಾಮಪದಗಳು

೧. ಗೌಡ
೨. ಒಕ್ಕಲಿಗ
೩. ಬ್ರಾಹ್ಮಣ
೪. ಪುರೋಹಿತ
೫. ಅಗಸ
೬. ಮಾದಿಗ
೭. ಹೊಲೆಯ

೩. ಅನ್ವರ್ಥನಾಮಗಳು

೧. ಕುಂಟ
೨. ಕುರುಡ
೩. ಪಂಡಿತ
೪. ಗಿಡ್ಡ
೫. ಹೆಳವ
೬. ದಾನಿ

ಹೀಗೆ ಭಾಷೆಯಲ್ಲಿನ ಪ್ರತಿಯೊಂದು ನಾಮಪದವೂ ಕೂಡ ಪುರುಷವಾಚಿಯಾಗಿಯೇ ಸೃಷ್ಟಿಯಾದದ್ದು. ಆನಂತರದಲ್ಲಿ ಪುಲ್ಲಿಂಗ ಪ್ರಕೃತಿಗಳಿಗೆ ಕೆಲವು ಸ್ತ್ರೀಲಿಂಗದ ಪ್ರತ್ಯಯಗಳನ್ನು ಸೇರಿಸಿಕೊಳ್ಳುವುದರ ಮುಖಾಂತರ ಸ್ತ್ರೀಲಿಂಗ ವಾಚಕಗಳನ್ನಾಗಿ ಪರಿವರ್ತಿಸಿಕೊಳ್ಳುವ ಪರಿಪಾಟ ಶುರುವಾಯಿತು.

ಉದಾ : ಪುಲ್ಲಿಂಗ ಪ್ರಕೃತಿ+ ಸ್ತ್ರೀಲಿಂಗ ಪ್ರತ್ಯಯ = ಸ್ತ್ರೀಲಿಂಗ ವಾಚಕ

೧. ಗೌಡ+ಇತಿ = ಗೌಡತಿ
೨. ಒಕ್ಕಲಿಗ + ಇತ್ತಿ = ಒಕ್ಕಲಗಿತ್ತಿ
೩. ಅಗಸ+ ಗಿತ್ತಿ = ಅಗಸಗಿತ್ತಿ
೪. ಜಾಣ+ಎ = ಜಾಣೆ

೫. ಮುದುಕ+ಇ = ಮುದುಕಿ

೬. ಮಗ+ಳು = ಮಗಳು

೭. ನಲ್ಲ+ಅಳು = ನಲ್ಲಳು

ಈ ರೀತಿ ಪುರುಷ ಪ್ರಕೃತಿಗಳಿಗೆ ಸ್ತ್ರೀ ಪ್ರತ್ಯಗಳನ್ನು ಸೇರಿಸಿಕೊಂಡು ಸ್ತ್ರೀವಾಚಕಗಳಾಗಿ ಪರಿವರ್ತಿಸಿಕೊಂಡಿದ್ದರೂ ಕೂಡ ಯಾರನ್ನಾದರೂ ನೀವು ಯಾವ ಜಾತಿ ಯಾವ ವೃತ್ತಿಯವರು ಎಂದು ಕೇಳಿದರೆ ಅವರು ಸ್ತ್ರೀಯರಾಗಲಿ, ಪುರುಷರಾಗಿರಲಿ, ಗೌಡಜಾತಿ, ಕುಂಬಾರ ವೃತ್ತಿಯೆಂದು ಹೇಳುತ್ತಾರೆ ವಿನಃ ಗೌಡತಿ ಜಾತಿ, ಕುಂಬಾರಿ' ವೃತ್ತಿ ಎಂದು ಹೇಳುವುದಿಲ್ಲ.

**ಸಮುದಾಯ ವಾಚಕ ನಾಮಪದಗಳು**

ಸಮುದಾಯ ವಾಚಕ ನಾಮಪದಗಳು ಕೂಡ ಪುರುಷವಾಚಕ ಶಬ್ಧಗಳನ್ನೇ ಒಳಗೊಂಡಿರುತ್ತವೆ. ಆ ಸಮುದಾಯದಲ್ಲಿ ಪುರುಷರಂತೆ ಸ್ತ್ರೀಯರು ಇದ್ದರೂ ಕೂಡ ಪುರುಷವಾಚಕಗಳೇ ಬಳಕೆಯಾಗುತ್ತಿರುತ್ತವೆ.

ಉದಾ :

೧. ಕುವೆಂಪು, ಕಾರಂತ, ತ್ರಿವೇಣಿ ಇವರೆಲ್ಲರೂ ನವೋದಯ ಸಾಹಿತ್ಯದ ಪ್ರಮುಖ 'ಬರಹಗಾರರು'.

೨. ಕುವೆಂಪು, ಕಾರಂತ, ತ್ರಿವೇಣಿ ಇವರೆಲ್ಲರೂ ನವೋದಯ ಸಾಹಿತ್ಯದ ಪ್ರಮುಖ 'ಬರಹಗಾರ್ತಿ'ಯರು.

೩. ಕುವೆಂಪು, ಕಾರಂತ, ತ್ರಿವೇಣಿ ಇವರೆಲ್ಲರೂ ನವೋದಯ ಸಾಹಿತ್ಯದ ಪ್ರಮುಖ ಬರಹಗಾರ/ಗಾರ್ತಿಯರು.

ಮೇಲಿನ ಮೂರು ಉದಾಹರಣೆಗಳಲ್ಲಿ 'ಬರಹಗಾರರು' ಎಂಬ ಪುರುಷವಾಚಕ ನಾಮ ಪದವೇ ಸಮುದಾಯ ವಾಚಕವಾಗುತ್ತದೆ ವಿನಃ 'ಬರಹಗಾರ್ತಿ' ಯರು ಎಂಬುದಲ್ಲ. ಏಕೆಂದರೆ ಬರಹಗಾರ್ತಿಯರು ಎಂಬುದು ಸ್ತ್ರೀವಾಚಕ ನಾಮಪದವಾದ್ದರಿಂದ ಅದು ಸ್ತ್ರೀ ಸಮುದಾಯಕ್ಕೆ ಮಾತ್ರ ಸೀಮಿತವಾಗುತ್ತದೆ. ಇದರಲ್ಲಿ ಪುರುಷ ಸೇರುವುದಿಲ್ಲ. ಆದರೆ 'ಬರಹಗಾರರು' ಎಂಬಲ್ಲಿ ಸ್ತ್ರೀ ಪುರುಷ ಇಬ್ಬರು ಸೇರಿರುತ್ತಾರೆ ಎಂಬ ಗ್ರಹಿಕೆ ನಮ್ಮಲ್ಲಿದೆ.

ಮೂರನೆಯ ಉದಾಹರಣೆಯಲ್ಲಿಯಂತೆ ಬರಹಗಾರ/ಬರಹಗಾರ್ತಿಯರು ಎಂದು ಪ್ರಜ್ಞಾಪೂರ್ವಕವಾಗಿ ಎಲ್ಲರೂ ಎಲ್ಲಾ ಕಡೆ ಬಳಸುವುದಿಲ್ಲ. ಎಲ್ಲೋ ಕೆಲವರು ಮಾತ್ರ ಇದಕ್ಕೆ ಅಪವಾದ ಎಂಬಂತೆ ಗೆರೆ ಎಳೆದು ಬಳಸುತ್ತಾರೆ.

ಉದಾ : ೧. ಅ. ಮನುಷ್ಯ ಅಮರನಲ್ಲ
ಆ. ಗಂಡಸು ಅಮರನಲ್ಲ
ಇ. ಹೆಂಗಸು ಅಮರಳಲ್ಲ

ಈ ಮೂರು ಉದಾಹರಣೆಗಳಲ್ಲಿ ಇಡೀ ಮನುಷ್ಯರ ಜಾತಿಗೆ ಅನ್ವಯವಾಗುವಂತೆ ಮೊದಲನೆಯ ಉದಾಹರಣೆಯನ್ನು ಬಳಸುತ್ತೇವೆಯೇ ಹೊರತು ಉಳಿದ ಎರಡು ಉದಾಹರಣೆಗಳನಲ್ಲ. ಮೊದಲನೆಯ ಉದಾಹರಣೆಯಲ್ಲಿ 'ಮನುಷ್ಯ', 'ಅಮರ' ಎರಡೂ ಪುರುಷವಾಚಕಗಳೇ ಆಗಿವೆ.

ಹಾಗಾದರೆ ಹಿಂದೆ ಎಂದೂ ಸ್ತ್ರೀವಾಚಕ ಪದಗಳನ್ನು ಸಮುದಾಯ ವಾಚಕಗಳನ್ನಾಗಿ ಬಳಸಿರುವ ಉದಾಹರಣೆಗಳಿಲ್ಲವೆ ? ಎಂಬುದನ್ನು ಪರಿಶೀಲಿಸುವುದಾದರೆ, ಇಂತಹ ಒಂದೆರಡು ಉದಾಹರಣೆಗಳು ದೊರೆಯುತ್ತವೆ.

ಉದಾ : 'ಋಗ್ವೇದದ ಕಾಲದ ಜನರು ಭೂಮಿ, ವಾಯು, ವರುಣ, ಅಗ್ನಿ ಮೊದಲಾದ ನಿಸರ್ಗ ದೇವತೆ ಗಳನ್ನು ಆರಾಧಿಸುತ್ತಿದ್ದರು.[೧೧]

ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ ಅಸ್ಥಿತ್ವದಲ್ಲಿದ್ದಾಗ ಇಂತಹ ರಚನೆಗಳು ಸೃಷ್ಟಿಯಾಗಿರಬಹುದು. ಆದರೆ ಪುರುಷ ಪ್ರಧಾನ ವ್ಯವಸ್ಥೆ ಬಲಗೊಂಡಂತೆಲ್ಲ ಈ ರೀತಿಯ ರಚನೆಗಳು ಗೌಣವಾಗಿ ಹೋದವು.

ಸ್ಥಾಪಿತ ಭಾಷೆಯಲ್ಲಿನ ಹೆಚ್ಚಿನ ಪ್ರಮಾಣದ ಪದಗಳು ಪುಲ್ಲಿಂಗಾಂಕಿತವೇ ಆಗಿವೆ. ಉದಾಹರಣೆಗೆ 'ಸ್ವಾತಂತ್ರ್ಯ' ಎಂಬುದನ್ನು ಪರಿಗಣಿಸುವುದಾದರೆ, ಸ್ವಾತಂತ್ರ್ಯದ ಹುಡುಕಾಟ, ಅದರ ಮಹತ್ವವನ್ನು ವೈಭವೀಕರಿಸುವ ಚಿತ್ರಣಗಳೆಲ್ಲ ಪುರುಷರ ಸವಲತ್ತಿನ ವಿಷಯಗಳು ಆ ಬಗೆಯ ಸ್ವತಂತ್ರರಾಗುವ ಸ್ಥಿತಿಗೆ ಹೆಣ್ಣು ತಾನೆಂದೂ ಏರಲಾರಳು ಎಂಬುದು ವ್ಯವಸ್ಥೆಯ ನಿಯಮ.

ಅದೇ ರೀತಿ 'ಕ್ರಾಂತಿ' ಎಂಬ ವಿಚಾರವೂ ಕೂಡ ಕೇವಲ ಪದವಲ್ಲ. ಅದು ಪುಲ್ಲಿಂಗಾಂಕಿತವೆ. ಇದು ಪುರುಷನಿಗೆ ಮಾತ್ರ ಮೀಸಲಾದುದು. ಹಾಗಾದರೆ ಸ್ತ್ರೀಗೆ 'ಕ್ರಾಂತಿ' ಪದದ ಅವಶ್ಯಕತೆ ಇಲ್ಲವೆ ? ಇದೆ. ಆದರೆ ಪುರುಷನಿಗಿರುವಷ್ಟು ಅದರ ಅನಿವಾರ್ಯತೆ ಸ್ತ್ರೀಗಿಲ್ಲ ಎಂಬುದು ವ್ಯವಸ್ಥೆಯ ತೀರ್ಮಾನ. ಆದ್ದರಿಂದ 'ಕ್ರಾಂತಿಕಾರಿ' ಎಂಬ ಪದದಷ್ಟು 'ಕ್ರಾಂತಿಕಾರಿಣಿ'ಎಂಬ ಪದದ ಬಳಕೆ ನಮ್ಮಲ್ಲಿಲ್ಲ. ಕ್ರಾಂತಿಯ ಮೂಲಕ ಅವಶ್ಯಕತೆಗಳ ಈಡೇರಿಕೆ ಹಾಗೂ ಸ್ವಾತಂತ್ರ್ಯಾಭಿಲಾಷೆ ಪುರುಷನಿಗೆ ಬೇಕು. ಸ್ತ್ರೀಗೆ ಇದರ ಅವಶ್ಯಕತೆ ಇಲ್ಲವೆಂಬುದು ಪುರುಷ ಪ್ರಧಾನ ವ್ಯವಸ್ಥೆಯ ತೀರ್ಮಾನ.

'ಧರ್ಮ' ಎಂಬ ವಿಚಾರವು ಸ್ತ್ರೀ-ಪುರುಷ ಇಬ್ಬರಿಗೂ ಸಮಾನವಾಗಿ ಅನ್ವಯವಾಗುವಂತಹ ವಿಚಾರ. ಆದರೆ 'ಧರ್ಮ' ಎಂಬ ಹೆಸರನ್ನ ಪುರುಷನಿಗೆ ಮಾತ್ರ ಇಡಲಾಗುತ್ತದೆಯೇ ವಿನಃ ಸ್ತ್ರೀಯರಿಗಲ್ಲ.ಇದೊಂದು ನಾಮಪದಗಳ ರಾಜಕಾರಣ, ಧರ್ಮರಾಯ, ಧರ್ಮಪ್ಪ, ಧರ್ಮೇಶ್ ಎಂಬ ಹೆಸರುಗಳಿವೆಯೇ ಹೊರತು ಧರ್ಮರಾಯಿ ಧರ್ಮವ್ಮ ಎಂಬ ಕಲ್ಪನೆ ನಮ್ಮಲ್ಲಿಲ್ಲ. ಪುರುಷನು ತನಗೆ ಶ್ರೇಷ್ಠವಾದುದೆಂದು ಗೋಚರಿಸಿದವುಗಳನ್ನೆಲ್ಲಾ ತನ್ನಲಿಂಗಾಂಕಿತಗಳನ್ನಾಗಿ ರಚಿಸಿಕೊಂಡ.

**ಸ್ತ್ರೀಲಿಂಗಾಂಕಿತಗಳು**

ಭಾಷೆಯಲ್ಲಿರುವ ಪ್ರತಿಯೊಂದು ಧಾತುಗಳು ಪುಲ್ಲಿಂಗಾಂಕಿತವಾದರೆ, ಸ್ತ್ರೀಲಿಂಗಕ್ಕೆಂದು ಮೀಸಲಾದ 'ಸ್ತ್ರೀಲಿಂಗಾಂಕಿತಗಳು' ಸೃಷ್ಟಿಯಾಗಿಲ್ಲವೆ? ಖಂಡಿತವಾಗಿಯೂ ಸೃಷ್ಟಿಯಾಗಿವೆ. ಆದರೆ ಪುಲ್ಲಿಂಗಾಂಕಿತಗಳನ್ನು ಸ್ತ್ರೀಯರಿಗೆ ಅನ್ವಯ ಮಾಡಿಕೊಳ್ಳಬಹುದಾದರೂ ಸ್ತ್ರೀ ಲಿಂಗಾಂಕಿತಗಳು ಪುರುಷನಿಗೆ ಎಂದಿಗೂ ಅನ್ವಯವಾಗುವುದಿಲ್ಲ.

ಸಮಾಜದಲ್ಲಿನ 'ಶ್ರೇಷ್ಠ' ದ ಕಲ್ಪನೆ ಏನಿದೆಯೋ ಅವೆಲ್ಲವೂ ಪುರುಷನಿಗೆ ಸೀಮಿತವಾದರೆ, ಅದಕ್ಕೆ ವಿರುದ್ಧವಾದ ಹೀನವಾದ ಕಲ್ಪನೆಗಳು ಹಾಗೂ ಕೆಲವು ಗುಣ, ನೈತಿಕತೆಯ ಕಟ್ಟಳೆಗಳಿಂದ ಕೂಡಿದ ಅಂಕಿತಗಳು ಸ್ತ್ರೀಯರಿಗೆ ಮಾತ್ರ ಸೀಮಿತವಾಗುತ್ತವೆ. ಇದನ್ನು ಕೆಲವು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಿಕೊಳ್ಳುವುದಾದರೆ.

**ಗುಣವಾಚಕಗಳಲ್ಲಿ ಲಿಂಗ ಸೂಚನೆ**

| | ಸ್ತ್ರೀ | ಪುರುಷ (ಇಲ್ಲ) |
|---|---|---|
| ೧. | ಪತಿವ್ರತೆ- | ಪತಿವ್ರತ |
| ೨. | ವ್ಯಭಿಚಾರಿ | ವ್ಯಭಿಚಾರ |
| ೩.. | ಗಯ್ಯಾಳಿ | ಗಯ್ಯಾಳ |
| ೪. | ಬಜಾರಿ | ಬಜಾರ |
| ೫. | ಮುಂಡೆ | ಮುಂಡ |
| ೬. | ಮುತ್ತೈದೆ | ಮುತ್ತೈದ |
| ೭. | ಕೋಮಲೆ | ಕೋಮಲ |

ಪುರುಷ ಲಿಂಗಾಂಕಿತಗಳಿಗೆ ಕೆಲವು ಸ್ತ್ರೀ ಪ್ರತ್ಯಯಗಳನ್ನು ಸೇರಿಸಿ ಸ್ತ್ರೀವಾಚಕಗಳನ್ನಾಗಿ ಬಳಸುವ ಪರಿಪಾಠ ಶುರುವಾದಂತೆ, ಸ್ತ್ರೀ ಲಿಂಗವಾಚಕಗಳಿಗೆ ಪುರುಷ ಪ್ರತ್ಯಯಗಳನ್ನು ಸೇರಿಸಿ ಪುರುಷವಾಚಕಗಳನ್ನಾಗಿ ಬದಲಾಯಿಸುವ ಪರಿಪಾಠ ಇನ್ನು ನಮ್ಮಲ್ಲಿ ಮೂಡಿಲ್ಲವೆಂದು ಹೇಳಬಹುದು. ಆದ್ದರಿಂದ ಸ್ತ್ರೀ ದೃಷ್ಟಿಯಿಂದ ಕನ್ನಡ ವ್ಯಾಕರಣದ ಮರುವ್ಯಾಖ್ಯಾನದ ಅಗತ್ಯವಿದೆ.

**ಮಹಿಳೆಯರದೇ ಹೊಸಭಾಷೆ ಸೃಷ್ಟಿಸಲು ಸಾಧ್ಯವಾಗಿದೆಯೇ ?**

ಭಾಷೆಯ ರಚನೆಯೆ ಪುರುಷ ಮೂಲೀಯವಾದದ್ದು. ಮಹಿಳೆಯರಿಗೆಂದೇ ಪ್ರತ್ಯೇಕವಾದ ಹೊಸ ಭಾಷೆಯನ್ನು ಸೃಷ್ಟಿಸುವ ಅನಿವಾರ್ಯತೆ ಇದೆ ಎಂಬ ಮಹಿಳಾವಾದಿಗಳ ಅಭಿಪ್ರಾಯವನ್ನು ಪರಿಗಣಿಸುವುದಾದರೆ ಮಹಿಳೆಯರದೇ ಪ್ರತ್ಯೇಕ ಹೊಸ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗಿದೆಯೇ ? ಎಂಬ ಪ್ರಶ್ನೆ ಎದುರಾಗುತ್ತದೆ. ಭಾಷಿಕ ವ್ಯವಸ್ಥೆಯಲ್ಲಿನ ತಾರತಮ್ಯ ಸ್ಥಿತಿಯನ್ನು ಕಳೆದು ಒಂದು ಸಮಾನತೆಯ ಸ್ಥಿತಿಯು ಸಾಧ್ಯವಾಗುವಂತೆ ಮಾಡಬಹುದೆ ? ಅಥವಾ ತಾರತಮ್ಯದ ಸ್ಥಿತಿಯನ್ನೇ ಹೆಣ್ಣಿನ ಭಾಷೆಯ ವಿಶಿಷ್ಟ ನೆಲೆಯೆಂದು ಗ್ರಹಿಸಿ ಅದರ ವಿಶಿಷ್ಟತೆಯನ್ನು ಕಾಯ್ದುಕೊಳ್ಳಬೇಕಾಗಿದೆಯೇ ?

ಮಹಿಳಾ ಸಂಸ್ಕೃತಿ ಪ್ರತ್ಯೇಕವಾದ ಅಸ್ತಿತ್ವವುಳ್ಳದ್ದಲ್ಲ. ಅದು ಪ್ರಧಾನವಾಹಿನಿಯೊಂದಿಗೆ ಭಾಗಿಯಾಗಿ, ವಿರೋಧಿಯಾಗಿ, ಸಂಕೀರ್ಣ ಸಂಬಂಧಗಳಲ್ಲಿ ತನ್ನ ಅಸ್ತಿತ್ವವನ್ನು

ಪಡೆದಿರುವಂಥದ್ದು. ಮುಖ್ಯವಾಹಿನಿಯಿಂದ ಈ ಸ್ತ್ರೀ ಸಂಸ್ಕೃತಿಯನ್ನು ಪ್ರತ್ಯೇಕಿಸಿ ಪರ್ಯಾಯ ವ್ಯವಸ್ಥೆಯನ್ನು ಕಟ್ಟುವ ಪ್ರಯತ್ನವು ಹೆಣ್ಣು ಗಂಡಿಗೆ ಅನ್ಯಳೆಂದು ಪ್ರತ್ಯೇಕಿಸಿ ಕಾಣುವ ತಾತ್ವಿಕತೆಯದೆ ಅನುಕರಣೆಯಾಗುವುದಿಲ್ಲವೇ ?

ಸ್ಥಾಪಿತ ಭಾಷೆಯನ್ನು ಬುಡಮೇಲು ಮಾಡಿ ಅದೇ ಸ್ಥಳದಲ್ಲಿ ಮತ್ತೊಂದನ್ನು ನೆಡುವುದರಿಂದ ಸ್ತ್ರೀವಾದವು ಯಾವುದನ್ನು ಪ್ರಶ್ನಿಸಲು ಹೊರಟಿದೆಯೋ ಅದೇ ಧೋರಣೆಗಳನ್ನು ಬಲಪಡಿಸಿ ಉಳಿಸಿಡುವಂತೆ ಆಗುತ್ತದೆ. ಮಹಿಳೆಯರದೇ ಪ್ರತ್ಯೇಕ ಭಾಷೆಯನ್ನು ಸೃಷ್ಟಿಸಲು ಹೊರಟಾಗ ತೋರಿಕೆಗೆ ಅದು ಸ್ವಾಯತ್ತವೆಂದು ಅನಿಸಿದರೂ ಇಂಥ ಎಲ್ಲಾ ಬಗೆಯ ಪ್ರತ್ಯೇಕತೆಗಳು ಸಮಾನತೆಯ ಪರಿಕಲ್ಪನೆಯಿಂದ ಹೊರಗುಳಿಯುತ್ತವೆ. ಇಷ್ಟಕ್ಕೂ ಒಪ್ಪಿತವಾದ ಭಾಷಿಕ ಸಾಂಕೇತಿಕ ಕ್ರಮಕ್ಕೆ ತಡೆಯೊಡ್ಡಿ ಅದನ್ನು ಏಕಾಏಕಿ ಬುಡಮೇಲು ಮಾಡಬಲ್ಲ ಹೊಸ ಭಾಷಿಕ ಸಂಕೇತ ವ್ಯವಸ್ಥೆಯನ್ನು ಸೃಷ್ಟಿಸಲು ಸಾಧ್ಯವಾಗುತ್ತದೆಯೇ ? ಸಾಧ್ಯವಾಗುವುದಿಲ್ಲ. ವಾಸ್ತವವಾಗಿ ಭಾಷೆಯಲ್ಲಿ 'ಗುಣ' ಅಥವಾ 'ತನ' ಗಳ ಕಲ್ಪನೆಗಳು ಮೂಲತಃ ಸ್ತ್ರೀ ಪುರುಷ ಇಬ್ಬರಿಗೂ ಅನ್ವಯವಾಗುವಂಥವುಗಳು. ಆದರೆ ಪುರುಷ ಪ್ರಧಾನ ವ್ಯವಸ್ಥೆಯ ಸ್ವ/ಅನ್ಯದ ಕಲ್ಪನೆಯಿಂದಾಗಿ ಇದು 'ಗಂಡುತನ' ಇದು 'ಹೆಣ್ಣುತನ' ಎಂದು ವಿಭಾಗಿತವಾಗಿದೆ.

''ಸ್ತ್ರೀಯರಿಗೆ ತಮ್ಮ ವಿಶಿಷ್ಟ ಅನುಭವಗಳನ್ನು ಹೇಳಿಕೊಳ್ಳಲು ಪುರುಷ ನಿರ್ಮಿತ ಭಾಷೆಯಲ್ಲಿ ಪದಗಳೇ ಇಲ್ಲ. ಭಾಷೆಯ ಒಳಗೆ ಮೈಗೂಡಿಕೊಂಡಿರುವ ಲಿಂಗತ್ವ ವ್ಯವಸ್ಥೆಯ ಮೌಲ್ಯಕಲ್ಪಿತ ಅರ್ಥ ಪರಂಪರೆಯನ್ನು ಮಹಿಳೆಯರು ಬಳಸುತ್ತಾ ಹೋದರೆ ಅವರ ಸ್ವಂತವೂ ಸ್ವತಂತ್ರವೂ ಆದ ಅನುಭವಗಳನ್ನು ಆ ಪದಗಳು ಹೇಳಲು ಸಾಧ್ಯವಾಗಲಾರವು. ಈ ಕಾರಣಕ್ಕಾಯೇ ತನ್ನದಾದ ಅನುಭವಗಳನ್ನು ಅವುಗಳ ಸಮಗ್ರ ವಿಶೇಷತೆಯೊಂದಿಗೆ ಭಾಷೆಯಲ್ಲಿ ಅಭಿವ್ಯಕ್ತಿಸಲಿಕ್ಕಾಗಿ ಮಹಿಳೆಯರು ಈಗಿರುವ ಪುರುಷ ಭಾಷೆಯ ಬದಲಾಗಿ ತಮ್ಮದೇ ಆದ ಭಾಷೆಯೊಂದನ್ನು ಸೃಷ್ಟಿಸಿಕೊಳ್ಳಬೇಕು.''[೧೨] ಎಂಬುದಾಗಿ ಸ್ತ್ರೀವಾದಿಗಳ ಒಂದು ಮುಖ್ಯ ವಿಚಾರಧಾರೆ ಹೇಳುತ್ತದೆ.

ಅದರಲ್ಲೂ ಮೇರಿ ಡೇಲಿ ಎಂಬ ಪಾಶ್ಚಾತ್ಯ ಸ್ತ್ರೀವಾದಿ ''ಪುರುಷ ರೂಪಿತ ಭಾಷೆಯನ್ನೇ ಬಿಟ್ಟು, ಹೆಣ್ತನ ಮತ್ತು ಪ್ರಕೃತಿಯ ನಡುವಿನ ಸಂಬಂಧಕ್ಕೆ ಒತ್ತು ನೀಡಿ ಸ್ತ್ರೀ ವಿಶಿಷ್ಟ ಭಾಷೆಯೊಂದನ್ನು ಸೃಷ್ಟಿಸಬೇಕು. ಜಗತ್ತೆಲ್ಲಾ ತಮ್ಮದೇ ಸಾಮ್ರಾಜ್ಯವೆಂದು

ಆಳುತ್ತಿರುವ ಪಿತೃ ಪ್ರಧಾನ ವ್ಯವಸ್ಥೆಯು ಇಲ್ಲಿನ ಪದಾರ್ಥಗಳ ಮೂಲ ಹೆಸರನ್ನು ಮುಸುಕು ಮಾಡಿ ಕೃತಕವಾಗಿ ತನ್ನ ಅಂಕಿತಗಳನ್ನು ನಾಮಕರಣ ಮಾಡಿದೆ. ಈ ವಸ್ತುಗಳನ್ನೆಲ್ಲಾ ಸ್ತ್ರೀ ದೃಷ್ಟಿಯಿಂದ ಮರು ನಾಮಕರಣ ಮಾಡಬೇಕಾಗಿದೆ.''[೧೩] ಎನ್ನುತ್ತಾಳೆ.

ಈ ವಾದಗಳನ್ನು ಪರಿಗಣಿಸುವುದಾದರೆ ಸ್ತ್ರೀಯರ ಅನುಭವಗಳ ಮೂಲಕ ದೇಹದ ಸಂವೇದನೆಗಳ ಲಯ, ಮಿಡಿತಗಳನ್ನು ತುಡಿಸಬಲ್ಲಂಥ ಸಮರ್ಥವಾದ ಭಾಷೆಯೊಂದರ ಅವಶ್ಯಕತೆ ಇದೆ ಎಂದಾಯಿತು. ಹಾಗಾದರೆ ಇಲ್ಲಿಯವರೆಗೂ ಹೆಣ್ಣಿನ ವಿಶಿಷ್ಟ ಅನುಭವಗಳು ಅಭಿವ್ಯಕ್ತಗೊಂಡಿರಲೇ ಇಲ್ಲವೇ? ಅಥವಾ ಆ ಅನುಭವಗಳನ್ನು ವ್ಯಕ್ತಪಡಿಸಲು ಅವರಿಗೆ ಅವಕಾಶಗಳಿರಲಿಲ್ಲವೇ ?

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಕೌಟುಂಬಿಕ ವಲಯದಲ್ಲಾಗಲೀ, ಸಾಮಾಜಿಕ ಪರಿಸರದಲ್ಲಾಗಲಿ ಹೆಣ್ಣಿನ ವಿಚಾರ ಅಭಿಪ್ರಾಯಗಳಿಗೆ ಹಿಂದೆ ಎಂದೂ ಬೆಲೆ ಇರಲಿಲ್ಲ ಎಂಬುದು ಸತ್ಯ. ಈಗಲೂ ಕೂಡ ಹೆಣ್ಣಿನ ಮಾತಿನ ಮಧ್ಯೆ ಗಂಡು ಪ್ರವೇಶಿಸಿ ಅವಳ ಮಾತನ್ನು ತುಂಡರಿಸಿ ಸುಮ್ಮನಿರು, ಮಾತಾಡಬೇಡ, ನಿನಗೆ ಅರ್ಥವಾಗುವುದಿಲ್ಲ, ಏನೇನೋ ಮಾತಾಡಬೇಡ ಎಂದು ಹೇಳುವುದನ್ನು ಗಮನಿಸಬಹುದು. ಆಗ ಹೆಣ್ಣಿನ ಮಾತು ಮೌನದೆಡೆಗೆ ಸಾಗುತ್ತದೆ. ' Invisibility of Women's Experience"[೧೪] ಎಂಬ ವಿಚಾರಕ್ಕೆ ಇಲ್ಲಿನ ಸಾಮಾಜಿಕ ಕಟ್ಟಳೆಗಳು ಕಾರಣವೇ ವಿನಃ ಭಾಷೆಯಲ್ಲಿಯೇ ಹೆಣ್ಣಿನ ಅನುಭವಗಳ ಅಭಿವ್ಯಕ್ತಿಗೆ ಪದಗಳೇ ಇಲ್ಲ ಎಂಬ ವಾದ ತರ್ಕ ಬಾಹಿರವಾದುದು. ಇದನ್ನು ಒಂದು ಉದಾಹರಣೆಯ ಮೂಲಕ ಸ್ಪಷ್ಟಪಡಿಸಿಕೊಳ್ಳುವುದಾದರೆ,

ಮ॥ ಮೃಗಯಾ ವ್ಯಾಜದಿನೊರ್ಮೆ ಶಂತನು ತೊವಿಲ್ಲರ್ಪಂ ಪಳಂಚಲ್ಕೆ ತ
ನ್ಮೃಗಶಾಬಾಕ್ಷಿಯ ಕಂಪುತಟ್ಟಿ ಮಧುಪಂ ಬೋಲ್ ಸೋಲ್ತು
ಕಂಡೊಲ್ದುನ ॥
ಲ್ಮೆಗೆ ದಿಬ್ಬಂಬಿಡಿವಂತೆವೋಲ್ ಪಿಡಿದು ನೀನ್ ಬಾ ಪೋಪಮೆಂದಂಗೆ ಮೆ ।
ಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ[೧೫]

ಈ ಪ್ರಸಂಗದಲ್ಲಿ ಶಂತನು ತನ್ನ ಮನಸ್ಸಿನ ಆಸೆ ಆಕಾಂಕ್ಷೆಗಳನ್ನು ನೇರವಾಗಿ ಧೈರ್ಯವಾಗಿ ವ್ಯಕ್ತಪಡಿಸಿದ ಆದರೆ ಸತ್ಯವತಿ ತನ್ನ ಮನಸ್ಸಿನ ಬಯಕೆಗಳನ್ನು ನೇರವಾಗಿ

ಭಾಷೆಯ ಮುಖಾಂತರ ವ್ಯಕ್ತಪಡಿಸಲು ಸಾಧ್ಯವಾಗದೆ ನಾಚಿಕೆಯಿಂದ ಹಿಂಜರಿದು ಪರೋಕ್ಷವಾಗಿ ತನ್ನ ಒಪ್ಪಿಗೆಯನ್ನು ಸೂಚಿಸುತ್ತಾಳೆ. ಅಂದಮಾತ್ರಕ್ಕೆ ಭಾಷೆಯಲ್ಲಿ ಹೆಣ್ಣಿನ ಅನುಭವಗಳ ಅಭಿವ್ಯಕ್ತಿಗೆ ಪದಗಳೇ ಇಲ್ಲವೆಂದು ಹೇಳಲಾಗುತ್ತದೆಯೇ? ಇಲ್ಲಿ ಹೆಣ್ಣು ಮುಕ್ತವಾಗಿ, ಧೈರ್ಯವಾಗಿ ನನ್ನ ಅಭಿಪ್ರಾಯಗಳನ್ನು ಹೇಳಬಾರದು ಎಂಬ ವ್ಯವಸ್ಥೆಯ ನಿಯಮಗಳು ಕೆಲಸ ಮಾಡುತ್ತಿವೆಯೇ ಹೊರತು ಭಾಷೆಯಲ್ಲ ಎಂಬುದನ್ನು ಗಮನಿಸಬೇಕು.

ಯಜಮಾನಿ ಸಂಸ್ಕೃತಿ ಗಂಡು-ಹೆಣ್ಣುಗಳಿಗೆ ಪ್ರತ್ಯೇಕವಾದ ವಲಯಗಳನ್ನು ವಿಧಿಸಿರುವುದರಿಂದ ಅದಕ್ಕನುಗುಣವಾಗಿ ಅವರ ಅನುಭವ ಗ್ರಹಿಕೆಗಳಲ್ಲಿ ವ್ಯತ್ಯಾಸಗಳಿರಬಹುದು. ಆದರೆ ಮೂಲತಃ ಮನುಷ್ಯರ ಭಾವನೆ, ಚಿಂತನೆಗಳು ಸ್ತ್ರೀ-ಪುರುಷ ಇಬ್ಬರಿಗೂ ಸಮಾನವಾಗಿ ಅನ್ವಯವಾಗುವಂಥವು. ಆದರೆ ಅಭಿವ್ಯಕ್ತಿಯ ವಿಚಾರ ಬಂದಾಗ ಮಾತ್ರ ಗಂಡಿಗೆ ಇಲ್ಲದಷ್ಟು ಅಡೆತಡೆಗಳು ಹೆಣ್ಣಿಗೆ ಹೆಚ್ಚಿನ ಪ್ರಮಾಣದಲ್ಲಿರುತ್ತವೆ.

ರೋಲಾನ್ ಬಾರ್ತ್ "ಲಿಂಗ ಪ್ರಭೇದವು ಪಿತೃಪ್ರಧಾನ ತಾತ್ವಿಕತೆಗೆ ಅರ್ಥ ನೀಡುವ ಒಂದು ಮಿಥ್. ಈ ಮಿಥ್ ಭಾಷೆಯದೆ ಒಂದು ವಿಧಾನವಾಗಿದ್ದು ಅದು ಚಾರಿತ್ರಿಕ ಸಂದರ್ಭವೊಂದರಿಂದ ಅದರ ಅರ್ಥವನ್ನು ಬೇರೆ ಮಾಡಿ, ಆ ಅರ್ಥವೇ ಶಾಶ್ವತವೋ, ನಿಜವೋ ಎಂಬಂತೆ ತೋರಿಸುತ್ತಿರುತ್ತದೆ. ಮರುಗಳಿಕೆಯ ಮೂಲಕ ಈ ಮಿಥ್ ಗಟ್ಟಿಯಾಗುತ್ತಾ ಹೋಗುವುದರಿಂದ ಜನರಿಗೆ ಅದು ಚರಿತ್ರೆ, ರಾಜಕೀಯಗಳಿಗೆ ಅತೀತವಾದ ತನ್ನಿಂದ ತಾನೇ ಉದ್ಭವಿಸಿದ ಸತ್ಯವೆಂಬಂತೆ ತೋರುತ್ತದೆ."[೧೬] ಎಂದು ಅಭಿಪ್ರಾಯ ಪಡುತ್ತಾನೆ.

ಬಾರ್ತ್‌ನ ವಿಚಾರ ಬಹಳ ಮಹತ್ವವಾದದ್ದು. ಏಕೆಂದರೆ ಭಾಷೆಯಲ್ಲಿನ ತರತಮ ಭಾವದ ಕಲ್ಪನೆ ಸಮಾಜದ ಸಂರಚಿತ ನಿಯಮಗಳೇ ವಿನಃ ಮೂಲತಃ ಭಾಷೆಯಲ್ಲಿಯೇ ಲಿಂಗತಾರತಮ್ಯದ ಅಂಶವಿಲ್ಲ ಎಂಬುದು ಸಾಮಾಜಿಕ ಚಿಂತನಾಕ್ರಮಗಳು ಈ ರೀತಿಯ ವಿಂಗಡಣಾಕ್ರಮಕ್ಕೆ ಕಾರಣವಾಗಿವೆ.

ಇಂತಹ ಪುರುಷಪ್ರಧಾನ ಭಾಷಿಕ ವ್ಯವಸ್ಥೆಯಲ್ಲಿ ಸ್ತ್ರೀಯರಿಗೆಂದೇ ಪ್ರತ್ಯೇಕವಾದ ಹೊಸ ಭಾಷೆ ಸೃಷ್ಟಿಸಲು ಸಾಧ್ಯವಾಗುತ್ತದೆಯೇ? ಖಂಡಿತ ಸಾಧ್ಯವಾಗುತ್ತದೆ ಅದು

ಯಾವಾಗೆಂದರೆ ಪುರುಷವಾಚಕ ಪ್ರಕೃತಿಗಳಿಗೆ ಕೆಲವು ಸ್ತ್ರೀ ವಾಚಕ ಪ್ರತ್ಯಯಗಳನ್ನು ಸೇರಿಸಿಕೊಳ್ಳುವಿಕೆಯ ಮುಖಾಂತರ ಹಾಗೂ ಭಾಷೆಯಲ್ಲಿನ ಸ್ಥಾಪಿತ ಅರ್ಥಗ್ರಹಿಕೆಯಲ್ಲಿನ ತಾರತಮ್ಯದ ನಿರಾಕರಣೆಯ ಮುಖಾಂತರ ಆ ಸಾಂಕೇತಿಕತೆಯನ್ನೇ ನಾಶಗೊಳಿಸಿ ಅರ್ಥಗ್ರಹಿಕೆಯ ನೆಲೆಯಲ್ಲಿ ಸಮಾನತೆಯನ್ನು ಪ್ರತಿಯೊಬ್ಬರೂ ಸಾಧಿಸಿಕೊಂಡಾಗ ಮಾತ್ರ. ಇರುವ ಭಾಷೆಯನ್ನೇ ಸ್ತ್ರೀಯು ತನ್ನದಾಗಿಸಿಕೊಳ್ಳಲು ಪ್ರಯತ್ನಿಸಬೇಕು. ನಮ್ಮ ಸಂಕುಚಿತ ಅರ್ಥಗ್ರಹಿಕೆಯ ವ್ಯಾಪ್ತಿಯನ್ನು ಸ್ತ್ರೀ ಪುರುಷ ಇಬ್ಬರೂ ವಿಸ್ತರಿಸಿಕೊಳ್ಳಬೇಕು.

**ಲಿಂಗಾತೀತವಾದ ಭಾಷೆ ಸೃಷ್ಟಿಸಲು ಸಾಧ್ಯವೆ ?**

ಈಗಿರುವ ಭಾಷೆಯ ಒಳಗಿನ ಲಿಂಗ ತಾರತಮ್ಯದ ಎಲ್ಲಾ ಸ್ತರಗಳನ್ನು ಶೋಧಿಸಿ ಸಮಾನವಾದ ಪದರೂಪಗಳನ್ನು ಕಟ್ಟಿ ಬಳಕೆಗೆ ತರುವುದು ಈ ನಿಟ್ಟಿನಲ್ಲಿ ಆಗಬೇಕಾದ ಬಹು ಪ್ರಾಯಾಸಕರವಾದರೂ ತುರ್ತಾದ ಸಂಗತಿ ಎನ್ನುವುದು ಇನ್ನೊಂದು ಪ್ರಚಾರದಲ್ಲಿರುವ ವಿಚಾರಧಾರೆ.

ಲಿಂಗರಾಜಕರಣವನ್ನು ವಿರೋಧಿಸಿ ಲಿಂಗರಾಣೀಕರಣವನ್ನು ಸ್ಥಾಪಿಸುವುದಕ್ಕಿಂತ 'ಲಿಂಗಾತೀತ' ವಾದ ಭಾಷೆಯನ್ನು ಸೃಷ್ಟಿಸಲು ಸಾಧ್ಯವೇ ? ಅಥವಾ ಅಲ್ಲಿ ಏನಾದರೂ ತೊಡಕು ಮಿತಿಗಳಿವೆಯೇ ? ಕೇವಲಭಾಷಿಕ ವಲಯದಲ್ಲಿ ಸಮಾನ ನೆಲೆ ಸ್ಥಾಪಿಸಿದರೆ ವಾಸ್ತವವಾಗಿ ಇರುವ ಸ್ಥಿತಿಗಳು ಬದಲಾಗುತ್ತವೆಯೇ ? ಒಂದು ವೇಳೆ ಲಿಂಗಾತೀತವಾದ ಭಾಷೆ ಸೃಷ್ಟಿಯಾದ ನಂತರ ಅದು ಆ ಇಡೀ ಸಮುದಾಯದಲ್ಲಿ ಅಪ್ರಜ್ಞಾಪೂರ್ವಕವಾಗಿ ಸಾಂಸ್ಕೃತಿಕ ಭಾಗವಾಗಿ ಬಳಕೆಯಾಗುವಷ್ಟು ಪ್ರಭಾವಯುತವಾಗಿರುತ್ತದೆಯೇ ಅಥವಾ ಕೇವಲ ಪ್ರಜ್ಞಾಪೂರ್ವಕ ಸ್ತರದಲ್ಲಿ ಮಾತ್ರ ಉಳಿದು ಬಿಡುತ್ತದೆಯೇ ?

ಲಿಂಗತಾರತಮ್ಯವಿರುವ ಸಮಾಜದಲ್ಲಿ ಲಿಂಗಾತೀತವಾದಂತಹ ಭಾಷೆಯನ್ನು ಸೃಷ್ಟಿಸುವುದನ್ನು ಸಾಧ್ಯವಾಗಿಸುವಿಕೆಗಿಂತ ಮೊದಲು ಲಿಂಗತಾರತಮ್ಯವನ್ನು ಸಂಪೂರ್ಣವಾಗಿ ನಾಶಗೊಳಿಸಬೇಕು. ಈ ಅಸಮಾನತೆಯನ್ನು ನಾಶಗೊಳಿಸದ ಹೊರತು ಸಮಾನತೆಯ ಕಲ್ಪನೆ ಭಾಷೆಯನ್ನು ಒಳಗೊಂಡಂತೆ ಯಾವುದೇ ವಿಷಯದಲ್ಲಿ ಚಾಲ್ತಿಗೆ ಬರಲಾರದು.

ಶಿಕ್ಷಣವಲಯದಲ್ಲಿನ ತಾರತಮ್ಯದಿಂದಾಗಿ ಸಮಾಜದಲ್ಲಿನ ಪ್ರಮುಖ ಹುದ್ದೆಗಳನ್ನು ಪುರುಷರೇ ಅಲಂಕರಿಸುತ್ತಿದ್ದರು. ಅದಕ್ಕನುಗುಣವಾಗಿ ವೈದ್ಯ, ಚೇರ್‌ಮನ್,

ಪ್ರಾಧ್ಯಾಪಕ, ಉಪನ್ಯಾಸಕ, ರಾಷ್ಟ್ರಪತಿ, ರಾಜ್ಯಪಾಲ, ಇತ್ಯಾದಿ ಪುರುಷವಾಚಕ ಪದಗಳು ಸೃಷ್ಟಿಯಾದದ್ದು ಸಹಜವೆ. ನಂತರದ ಸಾಮಾಜಿಕ ಬದಲಾವಣೆಯ ಫಲವಾಗಿ ಮಹಿಳೆ ಶಿಕ್ಷಣ ಕ್ಷೇತ್ರವನ್ನು ಪ್ರವೇಶಿಸಿ ಪುರುಷನಿಗೆ ಸಮಾನವಾದ ಹುದ್ದೆಗಳನ್ನು ಪಡೆಯಲಾರಂಭಿಸಿದಳು. ಆಗ ವೈದ್ಯೆ ಚೇರ್‌ವಿಮೆನ್, ಪ್ರಾಧ್ಯಾಪಕಿ, ಉಪನ್ಯಾಸಕಿ ಎಂದು ಮರು ನಾಮಕರಣ ಮಾಡಿಕೊಂಡಳು.

ಈ ಸ್ತ್ರೀತ್ವವೂ ಅಲ್ಲದೆ, ಪುರುಷತ್ವವೂ ಅಲ್ಲದ ಲಿಂಗಾತೀತವಾದ ಭಾಷೆಯನ್ನು ಸೃಷ್ಟಿಸಲು ಸಾಧ್ಯವೇ? ಈ ರೀತಿಯ ಲಿಂಗಾತೀತವಾದ ಭಾಷಿಕ ರಚನೆ ಪ್ರಪಂಚದಲ್ಲಿರುವ ಎಲ್ಲಾ ಭಾಷೆಗಳಲ್ಲೂ ಸಾಧ್ಯವಾಗುತ್ತದಯೇ ? ಎಂಬುದು ಈಗ ನಮ್ಮ ಮುಂದಿರುವ ಪ್ರಶ್ನೆ.

ಕೆಲವು ಭಾಷೆಗಳಲ್ಲಿ ಈ ರೀತಿಯ ಲಿಂಗಾತೀತವಾದ ಭಾಷಿಕ ರಚನೆ ಸಾಧ್ಯವಾಗುತ್ತದೆ. ಜಪಾನೀಸ್, ಥಾಯ್, ಕರಿಬ್ ಮತ್ತು ಯನ ಮುಂತಾದ ಭಾಷೆಗಳಲ್ಲಿ ಗಂಡಸರು ಮತ್ತು ಹೆಂಗಸರು ಬೇರೆ ಬೇರೆ ಮಾತಿನ ರೀತಿಗಳನ್ನು ಬಳಸುತ್ತಾರೆ. ಉದಾಹರಣೆಗೆ 'ಕೋ ಆಸತಿ' ಎಂಬ ಭಾಷೆಯಲ್ಲಿ ಗಂಡಸು ಬಳಸುವ ಭಾಷೆಯು ಕೆಲವು ವಿಶಿಷ್ಟ ವ್ಯಂಜನಗಳಿಂದ ಕೊನೆಯಾದರೆ, ಆ ರೂಪಗಳನ್ನು ಹೆಂಗಸರು ಇರುವಂತೆಯೇ ಬಳಸುತ್ತಾರೆ. ಇಲ್ಲಿ ಗಂಡಸರು ಪದದ ಕೊನೆಯ ಧ್ವನಿಯನ್ನು 'ಸ್' ಆಗಿ ಪರಿವರ್ತಿಸುತ್ತಾರೆ.

| ಉದಾ : | **ಹೆಂಗಸರು** | **ಗಂಡಸರು** |
|---|---|---|
| ೧ | Lakawc | Lakawce |
| ೨ | Ka | Kas |
| ೩ | Molhil | Molhis |
| ೪ | Tacwan | Tacwas [೧೭] |

ಹೀಗೆ ಪ್ರತಿಯೊಂದು ಪದಕ್ಕೂ ಗಂಡು 'ಸ್' ವ್ಯಂಜನವನ್ನು ಸೇರಿಸಿಕೊಂಡು ಉಚ್ಚರಿಸುತ್ತಾನೆ. ಇಂತಹ ರಚನೆಗಳಲ್ಲಿ 'ಸ್' ಸೇರಿಸಿಕೊಳ್ಳುವಿಕೆಯನ್ನು ಬಿಟ್ಟರೆ ಗಂಡು-ಹೆಣ್ಣಿನ ಭಾಷಾಬಳಕೆಯಲ್ಲಿ ಯಾವುದೇ ರೀತಿಯ ವ್ಯತ್ಯಾಸವಿರುವುದಿಲ್ಲ. ಆಗ ಗಂಡೂ ಅಲ್ಲದ ಹೆಣ್ಣೂ ಅಲ್ಲದ ಲಿಂಗಾತೀತವಾದ ರಚನೆ ಸಾಧ್ಯವಾಗುತ್ತದೆ.

ಆದರೆ ಕನ್ನಡದಂತಹ ಭಾಷೆಯಲ್ಲಿ ಈ ರೀತಿಯ ಲಿಂಗಾತೀತವಾದ ರಚನೆ ಸಾಧ್ಯವಾಗುತ್ತದೆಯೇ ? ಗಂಡೂ ಅಲ್ಲದ ಹೆಣ್ಣು ಅಲ್ಲದ ತಟಸ್ಥ ಸ್ಥಿತಿ ಸಾಧ್ಯವಾಗುತ್ತದೆಯೇ? ಖಂಡಿತವಾಗಿಯೂ ಇನ್ನೂ ಸಾಧ್ಯವಾಗಿಲ್ಲವೆಂದು ಹೇಳಬಹುದು. ಉದಾಹರಣೆಗೆ 'ರಾಷ್ಟ್ರಪತಿ' ಗಂಡಾದರೂ ರಾಷ್ಟ್ರಪತಿಯೇ, ಹೆಣ್ಣಾದರೂ ರಾಷ್ಟ್ರಪತಿಯೆ.'ರಾಷ್ಟ್ರಪತ್ನಿ' ಎಂದಾಗುವುದಿಲ್ಲ. ರಾಷ್ಟ್ರಪತಿ ಪುರುಷವಾಚಕ ಪದ ಅದೂ ಬೇಡ, ರಾಷ್ಟ್ರಪತ್ನಿ ಸ್ತ್ರೀವಾಚಕ ಪದ. ಹಾಗಾಗಿ ಅದೂ ಬೇಡ, ಹಾಗಾದರೆ ಆ ಹುದ್ದೆಗೆ ಏನೆಂದು ಸೂಚಿಸುವುದು ?

ಆಗ ಲಿಂಗಾತೀತವಾದ ನವಪದದ ನಿರ್ಮಾಣ ಮಾಡಬೇಕಾಗುತ್ತದೆ. ಇಂಗ್ಲೀಷ್ ಭಾಷೆಯಲ್ಲಿ ಈ ರೀತಿಯ ಕೆಲವು ಲಿಂಗಾತೀತವಾದ ರಚನೆಗಳನ್ನು ಕಾಣಬಹುದು. ಉದಾಹರಣೆಗೆ ಚೇರ್‌ಮನ್, ಚೇರ್‌ವಿಮನ್‌ಗೆ ಬದಲಾಗಿ 'ಚೇರ್‌ಪರ್ಸನ್' ಎಂದು ನವಪದ ನಿರ್ಮಾಣ ಮಾಡಿಕೊಳ್ಳಲಾಗಿದಗೆ. ಇದೇ ರೀತಿ ಕನ್ನಡದಲ್ಲಿ 'ರಾಷ್ಟ್ರಪತಿ' 'ರಾಜ್ಯಪಾಲ' ಮುಂತಾದ ಹುದ್ದೆಗಳಿಗೆ 'ರಾಷ್ಟ್ರತ್ವಹುದ್ದೆ', 'ರಾಜ್ಯತ್ವ ಹುದ್ದೆ' ಎಂದು ಮರುರಚನೆ ಮಾಡಿಕೊಂಡರೆ ಈ ರಚನೆಗಳು ಆ ಸಮುದಾಯದಲ್ಲಿ ಒಪ್ಪಿತವಾಗಿ ಬಳಕೆಗೆ ಬರುತ್ತವೆಯೇ? ಅಥವಾ ' ಭಾಷಾ ಸ್ವೀಕರಣ' ಕಾರ್ಯದ ಮುಖಾಂತರ ಪರಭಾಷೆಗಳಲ್ಲಿನ ಲಿಂಗಾತೀತವಾದ ನವಪದಗಳನ್ನು ಸ್ವೀಕರಿಸಬಹುದೆ ?

ಇಲ್ಲಿ ಪ್ರಶ್ನೆ ಏಳುವುದು ಹೀಗೆ ಪದಗಳನ್ನು ಮರುರಚಿಸುವ ಅಥವಾ ಸ್ವೀಕರಿಸುವ ವಿಷಯದಲ್ಲಲ್ಲ. ಹೀಗೆ ಸಾಧಿಸಲಾದ ಪದಗಳ ಅರ್ಥಗಳು ಪುನಃ ಆ ಸಂಸ್ಕೃತಿಯಲ್ಲಿನ ಗಂಡು/ಹೆಣ್ಣು ಎಂಬ ತಾರತಮ್ಯ ಭಾವದೊಂದಿಗೆ ಬೆಸೆದುಕೊಂಡೇ ರೂಢಿಗೆ ಬರುತ್ತವೆ ಎಂಬುದರಲ್ಲಿ . ಚೇರ್‌ಮನಪ್ಪ, ಚೇರ್‌ಮನಮ್ಮಗಳಾದಂತೆ, ಚೇರ್‌ಪರ್ಸನಪ್ಪ, ಚೇರ್‌ಪರ್ಸನಮ್ಮಗಳೆಂದು ರೂಢಿಗೆ ಬರುವ ಸಾಧ್ಯತೆಗಳಿವೆ.

ತೆಲುಗು ಭಾಷೆಯಲ್ಲಿ 'ಸ್ತ್ರೀಲಿಂಗ'ವನ್ನು ನಪುಂಸಕಲಿಂಗವೆಂದೇ ಪರಿಗಣಿಸಲಾಗುತ್ತದೆ.

ಉದಾ : ತೆಲುಗು : ನೀ ಪೆಣ್ಣಾಮು ಎಕ್ಕಡು ವಸ್ತುಂದಿ

ಕನ್ನಡ : ನಿನ್ನ ಹೆಂಡತಿ ಯಾವಾಗ ಬರುತ್ತದೆ.

ಇಂತಹ ರಚನೆಗಳಲ್ಲಿ ಸ್ತ್ರೀಲಿಂಗಕ್ಕೆ ಪ್ರತ್ಯೇಕ ಅಸ್ಥಿತ್ವವೇ ಇಲ್ಲವಾಗಿ ನಪುಂಸಕವಾಚಿಯಾಗಿಯೇ ರೂಢಿಯಲ್ಲಿರುವುದನ್ನು ಗಮನಿಸಬಹುದು. ಇಲ್ಲಿ ಸ್ತ್ರೀಲಿಂಗಕ್ಕೆ ಪ್ರತ್ಯೇಕ ಅಸ್ಥಿತ್ವವಿರುವಂತಹ ಭಾಷೆಯನ್ನು ಮೊದಲು ಸೃಷ್ಟಿಸಿಕೊಳ್ಳಬೇಕಾಗಿದೆ. ಇನ್ನು ಲಿಂಗಾತೀತವಾದ ರಚನೆಯ ಮಾತು ದೂರವೇ ಉಳಿಯುತ್ತದೆ ಎಂದು ಹೇಳಬಹುದು.

ಅದರಲ್ಲೂ ಕೆಲವು ಪದಗಳು ಸ್ತ್ರೀವಾಚಿ ಸೂಚಕಗಳಾಗಿ ಬದಲಾಯಿಸಿ ಬಳಸಲು ಸಾಧ್ಯವೇ ಇಲ್ಲದಷ್ಟು ಪುರುಷ ಪ್ರಾಧಾನ್ಯತೆಯಿಂದ ಕೂಡಿವೆ.

| ಉದಾ : | **ಪುರುಷ** | **ಸ್ತ್ರೀ ( ಇಲ್ಲ)** |
|---|---|---|
| ೧. | ಸ್ವಾಮಿ | ---- |
| ೨. | ಬುದ್ಧಿ | ---- |
| ೩. | ಧಣಿ | ---- |
| ೪. | ಜಗದ್ಗುರು | ---- |

ಈ ಮೇಲಿನ ಪದಗಳನ್ನು ಸ್ತ್ರೀಲಿಂಗವಾಚಿಯಾಗಿ ಬದಲಾಯಿಸಿ ಬಳಸಲು ಸಾಧ್ಯವೇ ಇಲ್ಲ. ಇವುಗಳಿಗೆ ಪರ್ಯಾಯ ಸೃಷ್ಟಿಗಳಿವೆ.

| ಉದಾ : | **ಸ್ತ್ರೀ** | **ಪುರುಷ (ಇಲ್ಲ)** |
|---|---|---|
| | ಮಾತೆ | ---- |
| | ಜಗಜ್ಜನನಿ | ---- |
| | ಅಮ್ಮಣ್ಣಿ | ---- |

ಹೀಗೆ ಪುರುಷ ವಾಚಕಗಳಿಗೆ ಪರ್ಯಾಯವಾಗಿ ಸ್ತ್ರೀವಾಚಕಗಳಿವೆಯೆ ಹೊರತು ಪುರುಷನೂ ಅಲ್ಲದ ಸ್ತ್ರೀಯೂ ಅಲ್ಲದ ಲಿಂಗಾತೀತವಾದ ರಚನೆಗಳಿಲ್ಲ. ಜಗದ್ಗುರು ಅಥವಾ ಜಗಜ್ಜನನಿ ಕಲ್ಪನೆಗಳಿಗೆ ಇಡೀ ಮಾನವ ಕುಲಕ್ಕೆ ಅನ್ವಯವಾಗುವಂತಹ 'ಒಂದು' ಲಿಂಗಾತೀತವಾದ ರಚನೆ ಇನ್ನೂ ಸಾಧ್ಯವಾಗಿಲ್ಲ.

ನಮ್ಮ ಅನೇಕ ಮಹಿಳಾವಾದಿಗಳು ಸ್ತ್ರೀಯರಿಗೆ ಪ್ರತ್ಯೇಕವಾದಗ ಭಾಷೆ ಬೇಕು ಎಂದು ವಾದಿಸಿದರೂ ಕೂಡ ಅವರ ಬರಹಗಳು ಪುರುಷ ವಾಚಕಗಳಿಂದಲೇ ಕೂಡಿರುವುದನ್ನು ಗಮನಿಸಬಹುದು. ಸುಮಿತ್ರಾಬಾಯಿ, ವಿಜಯಾದಬ್ಬೆ, ತೇಜಸ್ವಿನಿ

ನಿರಂಜನ, ಎಚ್.ಎಸ್. ಶ್ರೀಮತಿ ಮೊದಲಾದವರು 'ಮಹಿಳಾ ವಿಮರ್ಶಕರು', 'ಸ್ತ್ರೀ ಚಿಂತಕರು', 'ಮಹಿಳಾ ಬರಹಗಾರರು'ಎಂದೇ ಬಳಸಿದ್ದಾರೆ. ಇದಕ್ಕೆ ಕೆಲವು ಅಪವಾದವೆಂಬಂತೆ ಗಾಯತ್ರಿ ನಾವಡ, ಡಾ. ಪ್ರೀತಿಶುಭಚಂದ್ರ ಮೊದಲಾದವರು ಮಾತ್ರ ಬರೆಯುತ್ತಾನೆ/ಳೆ, ಚಿಂತಕಿ/ಚಿಂತಕ, ಬರಹಗಾರ/ಗಾರ್ತಿ ಎಂದು ಪ್ರಜ್ಞಾಪೂರ್ವಕವಾಗಿ ಗೆರೆ ಎಳೆದು ಬಳಸುತ್ತಾರೆ. ಆದಾಗ್ಯೂ ಇವರಿಗೂ ಕೂಡ ಎಲ್ಲಾ ಸಂದರ್ಭಗಳಲ್ಲೂ ಗೆರೆ ಎಳೆಯುವಿಕೆ ಸಾಧ್ಯವಾಗಿಲ್ಲ.

ಪುರುಷವಾಚಕಗಳಿಗೆ ಪರ್ಯಾಯವಾಗಿ ಸ್ತ್ರೀವಾಚಕಗಳನ್ನು ಸೃಷ್ಟಿಸಿಕೊಂಡಿದ್ದರೂ ಕೂಡ ಅದನ್ನು ಎಲ್ಲಾ ಕಡೆ ಸಮರ್ಪಕವಾಗಿ ಬಳಸಲು ಸಾಧ್ಯವಾಗುತ್ತಿಲ್ಲ. ಇದನ್ನು ತಪ್ಪೆಂದು ಹೇಳಲಾಗುವುದಿಲ್ಲ. ಬದಲಿಗೆ ಪುರುಷ ಪ್ರಧಾನ ಭಾಷೆ ನಮ್ಮ ಸಂಸ್ಕೃತಿಯ ಭಾಗವಾಗಿ ಬಿಟ್ಟಿದೆ. ಅದನ್ನು ಬದಲಿಸಲು ಪ್ರಯತ್ನಿಸಿದರೂ ಕೂಡ ಆ ಪ್ರಯತ್ನ ಸಫಲವಾಗಬೇಕಾದರೆ ಅನೇಕ ಶತಮಾನಗಳೇ ಬೇಕಾಗಬಹುದು.

ಪಿತೃ ಸಂಸ್ಕೃತಿಯಲ್ಲಿ ಭಾಷೆಯಲ್ಲಿ ದಾಖಲಾದ ಹೆಣ್ಣಿಗೆ ಸಂಬಂಧಿಸಿದ ಎಲ್ಲಾ ಸಂಕೇತಾರ್ಥಗಳನ್ನು ಪುರುಷ ಪ್ರತೀಕಗಳೆಂದು ಇಡಿಯಾಗಿ ತಿರಸ್ಕರಿಸಿದರೆ ಅವಳ ಅಭಿವ್ಯಕ್ತಿಗೆ ಉಳಿಯುವುದು ಶೂನ್ಯ ಮಾತ್ರ. ಹಾಗಾದರೆ ಪ್ರಚಲಿತವಿರುವ ಭಾಷೆಯ ಒಳಗಿನಿಂದಲೇ ತಮಗೆ ಬಲವನ್ನು ಹೆಚ್ಚಿಸಬಲ್ಲ, ಸತ್ವವನ್ನು ಒದಗಿಸಬಲ್ಲ, ತಮ್ಮ ಬುದ್ಧಿ, ತಮ್ಮ ಭಾವಗಳ ಲಯಕ್ಕೆ ತಕ್ಕುದಾದಂಥ ಲಕ್ಷಣಗಳನ್ನು ಸೋಸಿ ಹಿಡಿದು ಪಳಗಿಸಿಕೊಂಡು ಬಳಸಬೇಕು. ಅಗತ್ಯವಿರುವಾಗೆಲ್ಲ ತಮ್ಮದೇ ಪದಗಳನ್ನು ಸೃಷ್ಟಿಸಬೇಕು ಅಥವಾ ಇರುವುದನ್ನು ಹೆಣ್ಣಿಗೆ ಅನ್ವಯಮಾಡಿಕೊಂಡು ಬಳಸಿಕೊಳ್ಳಬೇಕು ಅಷ್ಟೇ.

| | | | | |
|---|---|---|---|---|
| ಉದಾ : | ೧. | ದಲಿತ | - | ದಲಿತೆ |
| | ೨. | ಪೋಲಿಸ್ | - | ಪೋಲೀಸಿಣಿ |
| | ೩. | ಏಕಾಂಗಿ | - | ಏಕಾಂಗಿನಿ |
| | ೪. | ಪ್ರಸಿದ್ಧ | - | ಪ್ರಸಿದ್ಧೆ |
| | ೫. | ಪಾದಾಚಾರಿ | - | ಪಾದಾಚಾರಿಣಿ |
| | ೬. | ಐದ | - | ಐದೆ ಇತ್ಯಾದಿ |

ಕನ್ನಡ ಭಾಷೆಯ ಸಂದರ್ಭದಲ್ಲಿ ಈ ರೀತಿಯ ಪುರುಷತ್ವ ಮತ್ತು ಸ್ತ್ರೀತ್ವದ ನೆಲೆಯಿಂದಲೇ ಭಾಷಾಸೃಷ್ಟಿ ಸಾಧ್ಯ. ಇದಕ್ಕೆ ಬದಲಾಗಿ ಗಂಡೂ ಅಲ್ಲದ ಹೆಣ್ಣು ಅಲ್ಲದ ತಟಸ್ಥ ಸ್ಥಿತಿ ಇನ್ನೂ ಸಾಧ್ಯವಾಗಿಲ್ಲ ಎಂದು ಹೇಳಬಹುದು.

**ಭಾಷೆ ಎಂಬ ಸಾಮರ್ಥ್ಯ ಪಡೆದುಕೊಳ್ಳುವಿಕೆ ಮತ್ತು ಬಳಸುವಿಕೆ**

ಭಾಷೆ ಎಂಬ ಸಾಮರ್ಥ್ಯವನ್ನು ಪಡೆದುಕೊಳ್ಳುವಿಕೆ ಹಾಗೂ ಬಳಸುವಿಕೆಯ ನಡುವೆ ವ್ಯತ್ಯಾಸವಿದೆ. ಭಾಷಿತ ಸಾಮರ್ಥ್ಯವನ್ನು ಪಡೆದುಕೊಳ್ಳುವ ಹಂತದಲ್ಲಿ ಹೆಣ್ಣು ಮತ್ತು ಗಂಡು ಎಂಬ ವ್ಯತ್ಯಾಸವಿಲ್ಲದೆ ಇರಬಹುದು. ಆದರೆ ಆ ಸಾಮರ್ಥ್ಯವನ್ನು ಪಡೆದುಕೊಂಡ ಮೇಲೆ ಅದರ ಬಳಕೆಯ ನೆಲೆಗೆ ಬಂದಾಗ ಖಂಡಿತವಾಗಿಯೂ ಹೆಣ್ಣಿಗೆ ಅನೇಕ ನಿಷೇಧಗಳಿವೆ.

ಹೆಣ್ಣುಮಕ್ಕಳು ಮನೆಯಲ್ಲಿ ಹೆಚ್ಚು ಜೋರಾಗಿ ಮಾತನಾಡದಂತೆ ತಡೆಯಲಾಗುತ್ತದೆ. ಇದು ಬಳಕೆಗೆ ಸಂಬಂಧಿಸಿದ ನಿಷೇಧ. ಕಲಿಕೆಗೆ ಸಂಬಂಧಿಸಿದಂತೆ ಇಂತಹ ನಿಯಮಗಳು ಅನ್ವಯವಾಗುವುದಿಲ್ಲ. ಅಲ್ಲದೆ ಕಲಿಕೆಯಲ್ಲಿ ಆಯ್ಕೆಗಳನ್ನು ನಿರ್ಬಂಧಿಸಲಾಗುತ್ತದೆ. ಉದಾಹರಣೆಗೆ ಗಹನವಾದ ವಿಚಾರಗಳು ಪುರುಷನ ಗ್ರಹಿಕೆಗೆ ಮಾತ್ರ ನಿಲುಕುವಂಥವು ಎಂಬ ಕಲ್ಪನೆ ಮೇರೆಗೆ ಆ ವಿಚಾರಗಳಲ್ಲಿ ಸ್ತ್ರೀ ಯಾವುದೇ ಜ್ಞಾನವನ್ನು ಸಂಪಾದಿಸಲು ಅವಕಾಶಗಳಿರಲಿಲ್ಲ. ಮಹಿಳೆಯೂ ಕೂಡ ಈ ವಿಚಾರಕ್ಕೆ ಸಂಬಂಧಿಸಿದ ಕಲಿಕೆಗೆ ಮುಂದಾಗುತ್ತಿರಲಿಲ್ಲ. ಇಲ್ಲಿ ಕಲಿಕೆಯ ವಿಷಯದ ಆಯ್ಕೆಯಲ್ಲೇ ನಿರ್ಬಂಧವಿದೆ.

ಸಾಮಾಜಿಕವಾಗಿ ಪಡೆದುಕೊಂಡ ಭಾಷಾ ಸಾಮರ್ಥ್ಯದ ಬಳಕೆಯಲ್ಲಿ ಔಪಚಾರಿಕ ಮತ್ತು ಅನೌಪಚಾರಿಕ ವಲಯಗಳೆರಡರಲ್ಲೂ ತಾರತಮ್ಯದ ನೆಲೆಗಳಿವೆಯೇ ? ಎಂಬುದನ್ನು ಪರಿಶೀಲಿಸುವುದಾದರೆ, ಔಪಚಾರಿಕ ವಲಯಕ್ಕಿಂತ ಅನೌಪಚಾರಿಕ ವಲಯದಲ್ಲಿ ಭಾಷಿಕ ನಿಷೇಧಗಳು ಹೆಚ್ಚು ಎಂದು ಹೇಳಬಹುದು.

ಗಂಡಿನ ಭಾಷೆ ಎಲ್ಲಾ ವಲಯದಲ್ಲೂ ಸರ್ವತಂತ್ರ, ಸ್ವತಂತ್ರ (ಅನ್‌ಮಾರ್ಕಡ್)ವಾದದ್ದು. ಹೆಣ್ಣಿನ ಭಾಷೆ ಅಧೀನ (ಮಾರ್ಕಡ್) ವಾದುದು. ಅವಳ ಭಾಷೆ ಸದಾ ಕೆಲವು ಕಟ್ಟುಪಾಡುಗಳಲ್ಲಿರುತ್ತದೆ. ಜೊತೆಗೆ ಹೆಣ್ಣಿಗೆ ನೈತಿಕ ಎಚ್ಚರಿಕೆ

ಸದಾಜೊತೆಗಾತಿ. ಹೆಣ್ಣಿಗೆ ಹೀಗೆಯೇ ಭಾಷೆಯನ್ನು ಬಳಸಬೇಕೆಂಬ ನಿಯಮ ನಿಯಂತ್ರಣಗಳಿವೆ. ಅವುಗಳೆಂದರೆ,

೧. ವಿನಯವಾಗಿ ಮಾತನಾಡಬೇಕು

೨. ಆದೇಶ ನೀಡಬಾರದು

೩. ಪ್ರಶ್ನಿಸಬಾರದು

೪. ಜೋರಾಗಿ ಮಾತನಾಡಬಾರದು

೫. ಹೆಚ್ಚು ಮಾತನಾಡಬಾರದು

೬. ಅಶ್ಲೀಲ ಪದಗಳನ್ನು ಬಳಸಬಾರದು

ಹೀಗೆ ಸಾಮಾಜಿಕ ನಿರೀಕ್ಷೆ ಮತ್ತು ನಿರ್ದೇಶನಕ್ಕೆ ತಕ್ಕಂತೆ ಆಕೆ ಭಾಷೆಯನ್ನು ಬಳಸಬೇಕೆಂಬ ಒತ್ತಡವಿದೆ. ಒಂದು ವೇಳೆ ಇವುಗಳನ್ನು ಮೀರುವಿಕೆಯ ಪ್ರಯತ್ನಗಳು ನಡೆದರೆ 'ಗಂಡುಬೀರಿ', 'ವಾಚಾಳಿ', 'ಗಯ್ಯಾಳಿ' ಮುಂತಾದ ನಾಮಪಟ್ಟಿಗಳ ಮೂಲಕ ಅವಹೇಳನಕ್ಕೆ ಒಳಗಾಗುತ್ತಾಳೆ. ಒಂದು ವೇಳೆ ಗಂಡಿನ ಭಾಷೆ, ನಡತೆ, ಹೆಣ್ಣಿನ ಈ ಲಕ್ಷಣಗಳಿಗೆ ಅನುಗುಣವಾಗಿದ್ದರೆ ಅವನಿಗೂ 'ಹೆಣ್ಣಿಗ', 'ಸಂಗ' ಮುಂತಾದ ನಾಮಪಟ್ಟಿಗಳುಂಟು.

ಒಂದು ಸಮುದಾಯದ ಒಪ್ಪಿತ ಮೌಲ್ಯಗಳ ಸಾಂಸ್ಕೃತಿಕ ಪ್ರತಿನಿಧಿಗಳಾದ ಗಾದೆ, ಒಗಟು, ಬೈಗುಳಗಳಲ್ಲಿಯೂ ಕೂಡ ಹೆಣ್ಣಿನ ಅಧೀನ ಸ್ಥಿತಿಗೆ ಪೂರಕವಾದ ರಚನೆಗಳನ್ನು ಗಮನಿಸಬಹುದು.

ಉದಾ -೧ : ಗಾದೆಗಳು

೧. ಮಾತು ಮನೆಕೆಡಿಸಿತು ತೂತು ಒಲೆಕೆಡಿಸಿತು

೨. ಹಾದರಗಿತ್ತಿ ಬಾಯಿ ಹಸೆಮುಂದೆ ನಿಲ್ದು

೩. ಹೆಣ್ಣಿನ ಮಾತು ಕೇಳುವುದೂ ಒಂದೇ, ನರಿಯನ್ನು ನಂಬಿ ಕೊಳಕ್ಕೆ ಬೀಳುವುದೂ ಒಂದೇ

೪. ಈಡು ಇಲ್ಲದ್ದು ಕೋವಿಯಲ್ಲಿ, ರೀತಿಯಿಲ್ಲದ್ದು ಹೆಣ್ಣಲ್ಲ

೫. ಅಂಡೆಬಾಯಿ ಕಟ್ಟಬಹುದು, ಮುಂಡೆಬಾಯಿ ಕಟ್ಟಲಾಗದು

೬. ತ್ವಾಟಕ್ಕೊಂದು ಬೇಲಿ, ಹೆಣ್ಣಿಗೊಂದು ತಾಳಿ

೭. ಹಾಲಿಗೆ ಉಕ್ಕು ಬರಬಾರದು, ಹೆಣ್ಣಿಗೆ ಸೊಕ್ಕು ಬರಬಾರದು

ಉದಾ-೨ : ಬೈಗುಳಗಳು

ಸ್ತ್ರೀವಾಚಕಗಳಿಂದಲೇ ಎಲ್ಲಾ ಬೈಗುಳಗಳ ಸೃಷ್ಟಿಯಾಗಿರುವುದನ್ನು ಗಮನಿಸಬಹುದು. ಪುರುಷನಿಗೆ ಬೈಯ್ಯುವಾಗಲೂ ಕೂಡ ಸ್ತ್ರೀ ನಿಂದನೆಯ ಮುಖಾಂತರವೇ ಪ್ರಾರಂಭವಾಗುವುದು.

ಉದಾ: ೧ ಮುಂಡೆ ಮಗ್ನೆ

೨. ಬೋಳಿಮಗ್ನೆ

೩. ನನ್‌ಸವತಿಮಗ್ನೆ

೪. ಹೆಣ್ಣಿಗ ಇತ್ಯಾದಿ

ಅನೌಪಚಾರಿಕ ವಲಯದಲ್ಲಿರುವಷ್ಟು ಔಪಚಾರಿಕ ವಲಯದಲ್ಲಿ ಭಾಷಾ ನಿಷೇಧಗಳಿಲ್ಲ. ಉದಾಹರಣೆಗೆ ಯಾವುದೇ ಸಭೆ, ಸಮಾರಂಭಗಳಲ್ಲಿ ನೀನು ಹೆಣ್ಣು ಹೆಚ್ಚು ಮಾತನಾಡಬಾರದು, ಜೋರಾಗಿ ಮಾತಾಡಬೇಡ, ಪ್ರಶ್ನಿಸಬೇಡ ಎಂದು ಹೇಳುವಂತಿಲ್ಲ. ಇವೆಲ್ಲ ಜರುಗುವುದು ಅನೌಪಚಾರಿಕ ವಲಯದಲ್ಲಿ ಮಾತ್ರ.

ಒಟ್ಟಾರೆ ನಮ್ಮ ಪ್ರತಿಯೊಂದು ಆಲೋಚನೆ, ಗ್ರಹಿಕೆಗಳು ಗಂಡು, ಹೆಣ್ಣು ಎಂಬ ದೇಹಗಳ ಮುಖಾಂತರವೇ ನಡೆಯುವುದರಿಂದ ಪುರುಷನೂ ಅಲ್ಲದ, ಸ್ತ್ರೀಯೂ ಅಲ್ಲದ ತಟಸ್ಥ ಸ್ಥಿತಿ ಅಸಾಧ್ಯ. ಇಬ್ಬರಿಗೂ ಸಮಾನವಾಗಿ ಅನ್ವಯವಾಗುವಂತಹ ಲಿಂಗಾತೀತವಾದ ಭಾಷೆಯ ಸೃಷ್ಟಿ ಕನ್ನಡ ಭಾಷೆಯ ಸಂದರ್ಭದಲ್ಲಿಯಂತೂ ಇನ್ನೂ ಸಾಧ್ಯವಾಗಿಲ್ಲ. ಬದಲಿಗೆ ಪುರುಷ ವಾಚಕಗಳನ್ನು, ಸ್ತ್ರೀವಾಚಕಗಳನ್ನಾಗಿ ಬದಲಾಯಿಸಿಕೊಂಡು ಬಳಸಬಹುದು ಅಷ್ಟೇ. ಅಲ್ಲದೆ ಭಾಷೆ ಮೂಲತಃ ಗ್ರಹಿಕೆಯಷ್ಟೇ ಆಗಿರುವುದರಿಂದ ಸ್ಥಾಪಿತ ಅರ್ಥ ಗ್ರಹಿಕೆಯಲ್ಲಿನ ತಾರತಮ್ಯದ ನಿರಾಕರಣೆಯ ಮುಖಾಂತರ ಆ ಅರ್ಥ ಗ್ರಹಿಕೆಯಲ್ಲೇ ಸಮಾನತೆಯನ್ನು ಸ್ತ್ರೀ ಪುರುಷ ಇಬ್ಬರೂ ಸಾಧಿಸಿಕೊಳ್ಳಬೇಕಾಗಿದೆ. ಅಲ್ಲದೆ ಭಾಷೆಯಲ್ಲಿ ಗಂಡು/ಹೆಣ್ಣು ಎಂಬ ಎರಡು ವಿಧಗಳಿಲ್ಲ. ಎರಡು ದೃಷ್ಟಿಕೋನಗಳಿವೆ ಅಷ್ಟೇ. ಆ ಎರಡು ದೃಷ್ಟಿಕೋನಗಳು ಇಬ್ಬರಲ್ಲೂ ಇರುವಂಥವುಗಳು, ಇಬ್ಬರಿಗೂ ಅನ್ವಯವಾಗು ವಂಥವುಗಳು.

## ಭಾಷೆಯಲ್ಲಿನ ಮೂರ್ತ ಮತ್ತು ಅಮೂರ್ತ ಗ್ರಹಿಕೆ

ಸಾಮಾನ್ಯವಾಗಿ ನಾವು ತಿಳಿದಿರುವಂತೆ 'ಭಾಷೆ'ಎಂದರೆ ವಾಸ್ತವವನ್ನು ಬಿಂಬಿಸುತ್ತಿರುವ ಒಂದು ಮಾಧ್ಯಮ ಎಂದು. ಆದರೆ ಭಾಷೆ ವಾಸ್ತವವನ್ನು ಬಿಂಬಿಸುವ ಸಾಧನ ಮಾತ್ರವಲ್ಲ. ಬದಲಾಗಿ ವಾಸ್ತವವನ್ನುಕಟ್ಟುತ್ತಿರುತ್ತದೆ. ಅಂದರೆ ನಾವು ವಾಸ್ತವವಂದು ತಿಳಿದದ್ದನ್ನು ಭಾಷೆಯಲ್ಲಿ ಕಟ್ಟುತ್ತಿರುತ್ತೇವೆ ಅಥವಾ ಮಂಡಿಸುತ್ತಿರುತ್ತೇವೆ.

ಉದಾಹರಣೆಗೆ ಹೆಣ್ಣು ನೋಡುವ ಸಂದರ್ಭದಲ್ಲಿ 'ಹುಡುಗಿ ಕಲ್ಲರ್ ಇದ್ದಾಳೆಯೇ'' ಎಂದು ಕೇಳುತ್ತಾರೆ. ವಾಸ್ತವದಲ್ಲಿ ಅವಳು ಯಾವುದಾದರೊಂದು ಬಣ್ಣ ಹೊಂದಿಯೇ ಇರುತ್ತಾಳೆ. ಅದು ಕಪ್ಪು, ಕೆಂಪು, ಬಿಳಿ ಯಾವುದಾದರೂ ಆಗಿರಬಹುದು. ಆದರೆ ಆ ಭಾಷಿಕ ಸಮುದಾಯದಲ್ಲಿ 'ಕಲ್ಲರ್' ಎಂದರೆ ಬಿಳಿ ಎಂದಷ್ಟೇ ಅರ್ಥ ನಿಶ್ಚಯವಾಗಿರುತ್ತದೆ. ಇದು ಆ ಸಮುದಾಯದ ಮಾತಿನ ಆಚೆಗಿನ ಅರ್ಥಗ್ರಹಿಕೆ.

ಭಾಷೆಯಲ್ಲಿ ಧ್ವನಿ, ಪದ, ವಾಕ್ಯಗಳಿಗಿಂತ ಅವುಗಳನ್ನು ಹೊರತುಪಡಿಸಿ ಅದರಾಚೆಗೆ ಉಂಟಾಗುವ ಗ್ರಹಿಕೆ ಮುಖ್ಯ. ಈ ಗ್ರಹಿಕೆಯನ್ನು ರೋಮನ್ ಜಾಕೋಬ್ಸನ್ 'Meta Language' ಎಂದು ಕರೆಯುತ್ತಾನೆ. ಈ ಮಾತಿನಾಚೆಗಿನ ಗ್ರಹಿಕೆಯಲ್ಲಿ ಎರಡು ವಿಧಗಳು

೧. ಮೂರ್ತ ಗ್ರಹಿಕೆ

೨. ಅಮೂರ್ತ ಗ್ರಹಿಕೆ

ಮೂರ್ತ ಗ್ರಹಿಕೆ ಎಂದರೆ ಒಂದು ವಸ್ತುವಾಚಕ ಪದ ನಮಗೆ ಕೇಳಿದೊಡನೆಯೇ ಆ ವಸ್ತುವಿನ ಚಿತ್ರ ನಮ್ಮ ಕಣ್ಣ ಮುಂದೆ ಮೂಡಿ (ನೆನಪಾಗಿ) ನಂತರ ಅರ್ಥ ಗ್ರಹಿಕೆ ಸಾಧ್ಯವಾಗುತ್ತದೆ. ಉದಾಹರಣೆಗೆ 'ಮರ 'ಎಂಬ ಶಬ್ಧ ಕೇಳಿದ ಕೂಡಲೇ ಮರದ ಚಿತ್ರ ನೆನಪಿಗೆ ಬಂದು ಅದರ ಮುಖಾಂತರ ಅರ್ಥ ಗ್ರಹಿಕೆ ಉಂಟಾಗುತ್ತದೆ. ಇದನ್ನು ಭಾಷೆಯಲ್ಲಿನ ಮೂರ್ತ ಗ್ರಹಿಕೆ ಎಂದು ಕರೆಯಬಹುದು.

ಆದರೆ ಕೆಲವು ವಿಚಾರಗಳ ವಿಷಯದಲ್ಲಿ ಈ ರೀತಿಯ ಗ್ರಹಿಕೆ ಸಾಧ್ಯವಾಗುವುದಿಲ್ಲ. ಉದಾಹರಣೆಗೆ 'ನೈತಿಕತೆ', 'ಆತ್ಮ', 'ಪ್ರೀತಿ', 'ರಾಷ್ಟ್ರೀಯತೆ' ಮುಂತಾದ ವಿಚಾರಗಳನ್ನು ಕೇಳಿದಾಗ ನಮಗೊಂದು ಮೂರ್ತರೂಪಿ ಗ್ರಹಿಕೆ ಉಂಟಾಗುವುದಿಲ್ಲ. ಬದಲಿಗೆ ವಿಶಾಲವಾದ ಅರ್ಥಗ್ರಹಿಕೆಯಿಂದ ಅರ್ಥಗ್ರಹಿತವಾಗುತ್ತದೆ. ಏಕೆಂದರೆ ಭಾಷೆಯಲ್ಲಿನ

ಈ ರೀತಿಯ ಗ್ರಹಿಕೆಗಳು ಮೂಲವಸ್ತು ಅಥವಾ ವ್ಯಕ್ತಿಗಳೊಂದಿಗೆ ಕಲ್ಪಿಸಿಕೊಂಡು ಉಂಟಾಗುವ ಅರ್ಥಗ್ರಹಿಕೆಗಳು. ಇವುಗಳನ್ನು ಭಾಷೆಯಲ್ಲಿನ ಅಮೂರ್ತ ಅರ್ಥ ಗ್ರಹಿಕೆ ಎಂದು ಕರೆಯಬಹುದು.

ಮೂಲವಸ್ತುಗಳ ಮುಖಾಂತರ ಅವುಗಳಿಗೆ ಅನ್ವಯವಾಗುವ ಕಲ್ಪಿತ ಆದರ್ಶೀಕೃತ ಅಥವಾ ಅನಾದರ್ಶೀಕೃತ ಅರ್ಥ ಸಾಧ್ಯತೆಗಳನ್ನು ಅಮೂರ್ತ ಗ್ರಹಿಕೆ ಒಳಗೊಂಡಿರುತ್ತವೆ. 'ನೈತಿಕತೆ' ಎಂಬ ಶಬ್ಧ ಕೇಳಿದ ತಕ್ಷಣ ಅದು ಮೂರ್ತರೂಪಿಯಾಗಿ ನಮ್ಮ ಗ್ರಹಿಕೆಗೆ ಒಂದು ಅರ್ಥಗ್ರಹಿಕೆ ಸಾಧ್ಯವಾಗುವುದಿಲ್ಲ. ಬದಲಿಗೆ ಮನುಷ್ಯನಿಗೆ ವಿಧಿಸಿದ ಕೆಲವು ಕಲ್ಪಿತ ಆದರ್ಶಗಳ ವಿಚಾರಗಳ ಮುಖಾಂತರ ಅರ್ಥ ಉಂಟಾಗುತ್ತದೆ.

ಭಾಷೆಯಲ್ಲಿನ ಮೂರ್ತಗ್ರಹಿಕೆಗಳಲ್ಲಿ ಯಾವುದೇ ತಾರತಮ್ಯಭಾವ ಉಂಟಾಗುವುದಿಲ್ಲ. ಅಮೂರ್ತ ಗ್ರಹಿಕೆಗಳಲ್ಲಿಯೇ ತಾರತಮ್ಯ ಭಾವ ಸೃಷ್ಟಿಯಾಗಿರುವುದು. 'ತರತಮ ಭಾವ' ಎಂಬುದೇ ಒಂದು ಅಮೂರ್ತ ಗ್ರಹಿಕೆ. ಗಂಡು-ಹೆಣ್ಣು ಎಂಬುದು ಮೂರ್ತಗ್ರಹಿಕೆ, 'ಪುರುಷತ್ವ','ಸ್ತ್ರೀತ್ವ'ಎಂಬ ಕಲ್ಪನೆ ಅಮೂರ್ತಕಲ್ಪನೆ. ಲಿಂಗತಾರತಮ್ಯವೆಂಬುದು ಸಮಾಜ ವಿಧಿಸಿದ ಕಲ್ಪಿತ ಅಮೂರ್ತ ಗ್ರಹಿಕೆ.

ಗಂಡು-ಹೆಣ್ಣು ಎಂಬ ಪದ ಕೇಳಿದಾಗ ಆ ವ್ಯಕ್ತಿಗಳು ಮೂರ್ತ ಸ್ವರೂಪವಾಗಿಯೇ ನಮಗೆ ಗೋಚರಿಸುವುದರ ಜೊತೆಗೆ ಸಮಾಜ ಸಂರಚಿಸಿರುವ 'ಗಂಡುತನ ಮತ್ತು 'ಹೆಣ್ಣುತನ' ಗಳ ಅಮೂರ್ತ ಕಲ್ಪನೆಗಳು ಜೊತೆ ಜೊತೆಗೆ ಗ್ರಹಿತವಾಗುತ್ತಿರುತ್ತವೆ.

ಭಾಷೆಯಲ್ಲಿನ ಅಮೂರ್ತಗ್ರಹಿಕೆಗಳೇ ಆ ಸಂಸ್ಕೃತಿಯ ನಿಜವಾದ ಸಾಂಸ್ಕೃತಿಕ ಭಾಗ. ಈ ಕಲ್ಪನೆಗಳು ಆ ಸಮುದಾಯದ ಯಜಮಾನೀಯ ದೃಷ್ಟಿಕೋನಕ್ಕೆ ಪೂರಕವಾಗಿ ಸಂರಚನೆಗೊಂಡಿರುತ್ತವೆ. ಅದಕ್ಕನುಗುಣವಾಗಿಯೇ ಗ್ರಹಿಕೆಯೂ ಉಂಟಾಗುತ್ತಿರುತ್ತವೆ. ಭಾಷೆಯಲ್ಲಿನ 'ಹೆಣ್ಣುತನ' ಮತ್ತು 'ಗಂಡುತನ' ಎನ್ನುವ ಒಂದು ಕಲ್ಪನಾ ನೆಲೆ ಪ್ರಪಂಚದ ಎಲ್ಲಾ ಭಾಷಿಕ ಚಿಂತನೆಗಳಲ್ಲಿಯೂ ಉಂಟಾಗಿದೆ.

ಮೂರ್ತ ಮತ್ತು ಅಮೂರ್ತ ಗ್ರಹಿಕೆಗಳು ಪರಸ್ಪರ ಪೂರಕವಾದವುಗಳು. ಮೂರ್ತವನ್ನು ಬಿಟ್ಟು ಅಮೂರ್ತದ ಗ್ರಹಿಕೆ ಸೃಷ್ಟಿಯಾಗಲಾರದು. ಅಮೂರ್ತದ ಗ್ರಹಿಕೆ ಸ್ಪಷ್ಟವಾಗುವುದೇ ಮೂರ್ತ ಗ್ರಹಿಕೆಗಳ ಮೂಲಕ. ಅಮೂರ್ತ ಗ್ರಹಿಕೆಯೇ ಒಂದು

ಸಮಾಜದ ನಿಜವಾದ ಚಿಂತನೆ, ದೃಷ್ಟಿಕೋನಗಳ ಪ್ರತಿಬಿಂಬ. ಅದೇ ಆ ಸಮಾಜದ ದರ್ಪಣ. ಈಗಿರುವಾಗ ಅಮೂರ್ತ ಕಲ್ಪನೆಯಲ್ಲಿನ ತರತಮಭಾವ ನಾಶವಾಗುವವರೆಗೂ ವಾಸ್ತವದಲ್ಲಿ ಲಿಂಗ ಸಮಾನತೆ ಸಾಧ್ಯವಾಗುವುದಿಲ್ಲ. ಸ್ತ್ರೀ-ಪುರುಷ ಸಮಾನ ಕಲ್ಪನೆ ಆ ಭಾಷೆಯ ಅಮೂರ್ತ ಗ್ರಹಿಕೆಯಲ್ಲಿ ಮೂಡುವವರೆಗೆ ಲಿಂಗತಾರತಮ್ಯ ಕೊನೆಗಾಣುವುದಿಲ್ಲ.

ನಮ್ಮೆಲ್ಲರ ಇಲ್ಲಿವರೆಗಿನ ಗ್ರಹಿಕೆಯ ಸ್ವರೂಪ ಇರುವುದೇ ಲಿಂಗ ಭಿನ್ನತೆಯಿಂದ. ಆದ್ದರಿಂದ ಲಿಂಗ ಸಮಾನತೆಯ ಕಲ್ಪನೆ ಸಾಕಾರಗೊಂಡು ಅದು ಅಪ್ರಜ್ಞಾಪೂರ್ವಕವಾಗಿ ನಮ್ಮ ಬದುಕಿನ ಒಂದು ಭಾಗವಾಗುವುದು ಅಷ್ಟು ಸುಲಭವಲ್ಲ. ಸಮಾನತೆ ಸಾಧ್ಯವಾದರೂ ಕೂಡ ಅದು ಎಲ್ಲಾ ಸ್ತರಗಳಲ್ಲೂ ಸಾದ್ಯವಾಯಿತು ಎಂದು ಹೇಳಲಾಗುವುದಿಲ್ಲ. ಸಮಾನತೆ ಎಂಬುದೇ ಒಂದು ಆದರ್ಶ. ಲಿಂಗ ಸಮಾನತೆ ಎಂಬುದು ಒಂದು ಹಂತದಲ್ಲಿ ಸಾಧಿಸಿಬಿಡುವಂಥದ್ದಲ್ಲ. ಅದೊಂದು ನಿರಂತರ ಪ್ರಕ್ರಿಯೆ. ಸ್ತ್ರೀ ಪುರಷ ಇಬ್ಬರೂ ಈ ಸಮಾನತೆಯ ಸ್ಥಿತಿಗೆ ಕೈಜೋಡಿಸಬೇಕು.

***ಅಡಿಟಿಪ್ಪಣಿ***

೧. ಸಿಮೊನ್ ದ ಬೋವಾ, ದ ಸೆಕೆಂಡ್ ಸೆಕ್ಸ್, (ಅನು) ಎಚ್.ಎಸ್. ಶ್ರೀಮತಿ, ೨೦೦೭, ಪು. ೨೮ ಇಲ್ಲಿ ಉಲ್ಲೇಖಿತ

೨. ಅದೇ, ಪು.೨೮, ಇಲ್ಲಿ ಉಲ್ಲೇಖಿತ

೩. ಅದೇ, ಪು. ೩೧

೪. ಅದೇ, ಪು. ೩೪, ಇಲ್ಲಿ ಉಲ್ಲೇಖಿತ

೫. ಓ.ಎಲ್. ನಾಗಭೂಷಣ್, ವಿಮರ್ಶೆಯ ಪರಿಭಾಷೆ, ೧೯೯೮, ಪು. ೩೮೯, ಇಲ್ಲಿ ಉಲ್ಲೇಕಿತ

೬. ಅದೇ, ಪು. ೩೯೧, ಇಲ್ಲಿ ಉಲ್ಲೇಖಿತ

೭. Mary M. Talbot, ' Feminism and Language', The Iconcritical Dictionary of Feminism and Post Feminism (Ed.) Sarah Gamble, P. 143. ಇಲ್ಲಿ ಉಲ್ಲೇಖಿತ

೮. ಡಾ. ಪ್ರೀತಿಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ೨೦೦೨, ಪು. ೧೨೪, ಇಲ್ಲಿ ಉಲ್ಲೇಖಿತ

೯. ಅದೇ , ಪು. ೧೨೬, ಇಲ್ಲಿ ಉಲ್ಲೇಖಿತ

೧೦. ಅದೇ, ಪು. ೧೫೧, ಇಲ್ಲಿ ಉಲ್ಲೇಖಿತ

೧೧. ಸಮಾಜವಿಜ್ಞಾನ, ಐದನೇ ತರಗತಿ ಪಠ್ಯಪುಸ್ತಕ, ಕರ್ನಾಟಕ ಪಠ್ಯ ಪುಸ್ತಕ ಸಂಘ, ೨೦೦೯, ಪು. ೨೯

೧೨. ಡಾ. ಬಿ.ಎನ್. ಸುಮಿತ್ರಾಬಾಯಿ, ಸ್ತ್ರೀವಾದ, ೨೦೦೬, ಪು. ೯೧

೧೩. ಅದೇ, ಪು. ೯೩, ಇಲ್ಲಿ ಉಲ್ಲೇಖಿತ

೧೪. ಡಾ. ಎಚ್.ಎಸ್. ರಾಘವೇಂದ್ರರಾವ್, ಲೈಂಗಿಕತಾವಾದಿ ಭಾಷೆ ಮತ್ತು ಸಂಕಥನ, ಹೆಣ್ಣು ಮತ್ತು ಭಾಷೆ, ( ಸಂ) ಎಚ್.ಎಸ್. ಶ್ರೀಮತಿ, ೨೦೦೭, ಪು. ೭೭

೧೫. ಪಂಪ, ವಿಕ್ರಮಾರ್ಜುನ ವಿಜಯ, ಪ್ರಾಚೀನ ಕಾವ್ಯಾಂಜಲಿ, (ಸಂ.) ಡಾ. ಸಿ.ವಿ. ವತ್ಸಲಾದೇವಿ, ೨೦೦೧, ಪು. ೧.

೧೬. ಡಾ. ಬಿ.ಎನ್. ಸುಮಿತ್ರಾಬಾಯಿ, ಸ್ತ್ರೀವಾದ, ೨೦೦೬, ಪು. ೩೧, ಇಲ್ಲಿ ಉಲ್ಲೇಖಿತ

೧೭. ಡಾ. ಕೆ.ವಿ. ನಾರಾಯಣ್, 'ಭಾಷೆ' ವಿಶ್ವಕೋಶ, ೨೦೦೭, ಪು. ೩೧.

# ಅಧ್ಯಾಯ - ೩

## ಜ್ಞಾನಕ್ಕಾವಲಿಂಗ

'ಜ್ಞಾನ' ಎಂದರೆ ಏನು? ಎಂಬ ಪ್ರಶ್ನೆಗೆ ಉತ್ತರ ಆಯಾ ಸಮಾಜಗಳಲ್ಲಿನ ಅಧಿಕಾರದ ವಿನ್ಯಾಸಗಳಿಂದಲೇ ನಿರ್ಧಾರಗೊಳ್ಳುತ್ತದೆ. ಅಧಿಕಾರ ರೂಢ ಚಿಂತನೆಯಲ್ಲಿ ಪ್ರಧಾನ ವಾಹಿನಿಯು ಪ್ರತಿಪಾದಿಸುವ ವಿಚಾರ, ತರ್ಕ, ತತ್ವ ಎಲ್ಲವೂ ಜ್ಞಾನವೇ. ಉಳಿದೆಲ್ಲವುಗಳು ಅಜ್ಞಾನದ ಸಂಗತಿಗಳೆ. ಜ್ಞಾನವು ಲಿಂಗಪ್ರಬೇಧಿತ ಅನುಭವಗಳಿಂದ ನೇರವಾಗಿ ಗ್ರಹಿಸಲು ಬರುವಂಥವುಗಳೇ? ಆದರೂ ಇದುವರೆಗೆ ನಾವು 'ಸತ್ಯ' ಎಂದು ಕಾಣುತ್ತಾ ಬಂದಿರುವುದೆಲ್ಲಾ ವಾಸ್ತವದಲ್ಲಿ ಹೆಚ್ಚು ಕಡಿಮೆ ಪುರುಷನ ಅಭಿಪ್ರಾಯವಷ್ಟೇ. ವಸ್ತುನಿಷ್ಠತೆ ಎನ್ನುವುದು ಜಗತ್ತನ್ನು ಪುರುಷರು ನೋಡುವ ರೀತಿಯಲ್ಲಿ ನೋಡುವ, ಅವರು ಅನುಭವಿಸುವಂತೆ ಅನುಭವಿಸುವುದಷ್ಟೇ ಆಗಿದೆ.

ಗಂಡು ಮತ್ತು ಹೆಣ್ಣಿನ ಆಲೋಚನೆ ಮತ್ತು ಲೋಕಗ್ರಹಿಕೆಯ ವಿಧಾನಗಳಲ್ಲಿ ವ್ಯತ್ಯಾಸಗಳಿವೆ, ಗಂಡು ಹೆಣ್ಣಿನ ತಾತ್ವಿಕತೆ ಭಿನ್ನ ಎಂದು ಹೇಳಲಾಗುತ್ತಿದೆ. ಹಾಗಾದರೆ ಗಂಡು ಮತ್ತು ಹೆಣ್ಣಿನ ಆಲೋಚನೆ, ಲೋಕಗ್ರಹಿಕೆ ಹಾಗೂ ತಾತ್ವಿಕತೆಗಳು ನಿಜಕ್ಕೂ ಭಿನ್ನವಾಗಿವೆಯೇ ? ಹಾಗಾದರೆ ಅದಕ್ಕೆ ಕಾರಣಗಳೇನು? ಎಂಬುದನ್ನು ಮೊದಲು ಪರಿಶೀಲಿಸಿ, ಅನಂತರ ಹೌದೇ ? ಅಲ್ಲವೇ ? ಎಂಬ ತೀರ್ಮಾನಕ್ಕೆ ಬರಬಹುದು.

ಅದಕ್ಕೂ ಮೊದಲು ಗಂಡು/ಹೆಣ್ಣಿನ ಆಲೋಚನಾ ಕ್ರಮ ವಿಚಾರಗ್ರಹಿಕೆ ಮತ್ತು ಅಭಿವ್ಯಕ್ತಿಗೆ ಸಂಬಂಧಪಟ್ಟಂತೆ ಕೆಲವು ಗುಣಗಳನ್ನು ವಿಂಗಡಿಸಿ ಆರೋಪಿಸಲಾಗಿದೆ. ಅವುಗಳನ್ನು ಪಟ್ಟಿಮಾಡುವುದಾದರೆ,

| **ಗಂಡಿನ ಆಲೋಚನಾ ಕ್ರಮ** | **ಹೆಣ್ಣಿನ ಆಲೋಚನಾ ಕ್ರಮ** |
|---|---|
| ಖಚಿತತೆ | ಖಚಿತತೆ ಇಲ್ಲ |
| ಚಿಂತನೆ | ಭಾವನೆ |
| ತರ್ಕನಿಕಟ | ತರ್ಕಶುದ್ಧವಲ್ಲ |
| ಸಾದೃಶ ಮೂಲ ಚಿಂತನೆ | ಸಂಬಂಧ ಮೂಲ ಚಿಂತನೆ |

| | |
|---|---|
| ಮಂಡಿಸುವಿಕೆ | ಸಮ್ಮತಿ ಅಪೇಕ್ಷಿಸುವಿಕೆ |
| ಬೌದ್ಧಿಕ ಮಟ್ಟದ್ದು | ಅಬೌದ್ಧಿಕತೆ |
| ವೀರ್ಯವತ್ತಾದ ಶೈಲಿ | ಅಡುಗೆ ಮನೆ ಭಾಷೆ |
| ನಿರ್ಧಾರಕ ನೆಲೆ | ಪ್ರತಿಕ್ರಿಯೆ ಅಪೇಕ್ಷಿಸುವಿಕೆ |
| ಸಾಬೀತು ಪಡಿಸುವಿಕೆ | ಒಪ್ಪಿಕೊಳ್ಳುವಿಕೆ |
| ವಾದ ಹೂಡುವ ಬಗೆ | ನಿರೂಪಣಾ ಮಾರ್ಗ |
| ಗಂಭೀರ ವಿಚಾರಗಳ ಚರ್ಚೆ | ಹರಟೆ |

ಶ್ರೇಣೀಕೃತ ವ್ಯವಸ್ಥೆಯಲ್ಲಿ ಪುರುಷನ ಶ್ರೇಷ್ಠತೆ, ಪುರುಷನ ಪರಮಾಧಿಕಾರದ ಮೂಲಕ ಸೃಷ್ಟಿಯಾಗಿರುವ ಎಲ್ಲಾ ಬಗೆಯ ವಿಚಾರಧಾರೆಗಳು, ಜ್ಞಾನಪ್ರಕಾರಗಳು, ಕಲೆ, ಸಾಹಿತ್ಯಗಳಂತಹ ಸಾಂಸ್ಕೃತಿಕ ಅಭಿವ್ಯಕ್ತಿಗಳೂ ಪುರುಷ ಕೇಂದ್ರಿತ ದೃಷ್ಟಿಕೋನದಿಂದಲೇ ರೂಪುಗೊಂಡಿದ್ದು ಅದನ್ನೇ ಎತ್ತಿ ಹಿಡಿಯುತ್ತಿರುತ್ತವೆ.

ಯಾವುದೇ ಸಂಸ್ಕೃತಿಯಾದರೂ ಒಂದು ನಿರ್ದಿಷ್ಟಬಗೆಯ ಸ್ತ್ರೀ ಪ್ರತೀಕಗಳ ಪ್ರಸಾರಕ್ಕೆ ಮಾತ್ರ ಅವಕಾಶ ಕೊಡುತ್ತದೆ. ಅದಕ್ಕೆ ಪೂರಕವಾಗಿ ಪುರುಷನಿಗೆ 'ಹೊರಜಗತ್ತು' ಮಹಿಳೆಗೆ 'ಒಳಜಗತ್ತು' ಗಳನ್ನು ಸೃಷ್ಟಿಸುತ್ತದೆ. ಈ ಹೊರಜಗತ್ತು, ಒಳಜಗತ್ತುಗಳ ನಡುವಿನ ಅಗಾಧವಾದ ಕಂದರಗಳ ಫಲವಾಗಿ ಸ್ತ್ರೀ-ಪುರುಷರಿಬ್ಬರ ವ್ಯಕ್ತಿತ್ವದ ಬೆಳವಣಿಗೆಗಳು ಸಮಗ್ರವಾಗಿ ಆಗಲಾರದೆ ಹೋಗುತ್ತವೆ. ಕ್ಷೇತ್ರವನ್ನು ಒಳಾಂಗಣದ್ದು ಮತ್ತು ಹೊರಗಿನದು ಎಂದು ವಿಭಜಿಸಿರುವುದಕ್ಕೂ ಲಿಂಗ ಶ್ರೇಣೀಕರಣವೇ ಕಾರಣ. ಆಗಲೆ 'ಉದ್ಯೋಗಂ ಪುರುಷ ಲಕ್ಷಣಂ' 'ಗೃಹಿಣೀ ಗೃಹಮುಚ್ಚತೇ' ಎಂಬ ನುಡಿಗಟ್ಟುಗಳು ಸೃಷ್ಟಿಯಾಗಲು ಸಾಧ್ಯ.

ಪುರುಷಕೇಂದ್ರಿತ ಚಿಂತನೆ, ದೃಷ್ಟಿಕೋನ ಮಾನವ ಸ್ವಭಾವವನ್ನು ಹೆಣ್ಣಿನದು / ಗಂಡಿನದು ಎಂದು ಇಬ್ಬಗೆಯಾಗಿ ವಿಂಗಡಿಸಿ ಸ್ವೀಕರಿಸುತ್ತಾ ಬಂದಿದೆ. ವ್ಯವಸ್ಥೆಯು ನಿರೀಕ್ಷಿಸುವ ಕೆಲವು ನಿರ್ದಿಷ್ಟ ಗುಣಗಳನ್ನು ಪುರುಷ ಮತ್ತು ಮಹಿಳೆ ಹೊಂದಿರಲೇ ಬೇಕು. ಆ ಗುಣಗಳನ್ನೇ ನಿಸರ್ಗದತ್ತಗುಣಗಳೆಂದು ಆರೋಪಿಸಿ ಅವುಗಳನ್ನೇ ಸದಾ ಎತ್ತಿ ಹಿಡಿಯುತ್ತಿರುತ್ತದೆ.

ಕೋಮಲತೆ, ಭಯ, ಭಾವನಾಶೀಲತೆ, ತಾಳ್ಮೆ, ಕ್ಷಮೆ, ತ್ಯಾಗ, ಹೆಣ್ಣುಗುಣಗಳೆಂದು ಇದಕ್ಕೆ ವಿರುದ್ಧವಾಗಿ ಸಾಹಸ, ಬಿರುಸು, ಆಕ್ರಮಣಶೀಲತೆ, ತರ್ಕನಿಷ್ಠೆ, ಸ್ಪರ್ಧೆ ಅಪೇಕ್ಷಿಸುವಿಕೆ, ನಿರ್ಧಾರಕ ಗುಣ ಗಂಡುಗುಣಗಳೆಂದು ಹೇಳಲಾಗುತ್ತದೆ. ನಿಜವಾಗಿ ಈ ಇಬ್ಬಗೆಯ ಗುಣಗಳು ಸ್ತ್ರೀ ಪುರುಷರಿಬ್ಬರಲ್ಲೂ ಇರಬಹುದು. ಅವು ಯಾರೊಬ್ಬರ ಸ್ವತ್ತಲ್ಲ. ಆಯಾ ವ್ಯಕ್ತಿಯ ಕೌಟುಂಬಿಕ ಪರಿಸರ, ಬಾಲ್ಯದ ಅನುಭವಕ್ಕೆ ಅನುಗುಣವಾಗಿ ಯಾವುದೋ ಕೆಲವು ಗುಣಗಳು ಪ್ರಧಾನವಾಗಿ 'ಅವಳು' ಅಥವಾ 'ಅವನಲ್ಲಿ' ಕಾಣಿಸಿಕೊಳ್ಳುತ್ತವೆ.

ಪ್ರತಿಯೊಂದು ಕ್ಷೇತ್ರಗಳಲ್ಲೂ ಗಂಡು/ಹೆಣ್ಣು ಹೇಗಿರಬೇಕು, ಹೇಗೆ ಬದುಕಬೇಕು ಎಂಬುದೆಲ್ಲ ಅವರ ಪ್ರವೇಶಕ್ಕೂ ಮೊದಲೇ ತೀರ್ಮಾನವಾಗಿರುತ್ತವೆ. 'ಹುಡುಗ' 'ಹುಡುಗಿ' ಯರೆಂದರೆ ಹೇಗಿರಬೇಕು ಎಂದು ಬಾಲ್ಯದಲ್ಲೇ ಕಲಿವ ಅವರು ಮುಂದೆ 'ಪುರುಷ'ರಾಗಿ 'ಮಹಿಳೆ'ಯರಾಗಿ ಹೇಗಿರಬೇಕೆಂಬುದನ್ನು ಪರಿಕಲ್ಪಿಸಿಕೊಂಡಿರುತ್ತಾರೆ.

ವ್ಯವಸ್ಥೆಯೂ ರೂಪಿಸಿರುವ ಮೌಲ್ಯಗಳನ್ನು ತಮ್ಮಲ್ಲಿ ಅಂತಸ್ಥವಾಗಿಸಿಕೊಳ್ಳುತ್ತಲೇ ಬೆಳೆವ ಸ್ತ್ರೀಯರು ಸ್ವತಃ ತಮ್ಮನ್ನು ಪುರುಷರಿಗಿಂತ ಕೀಳೆಂದು ಭಾವಿಸುತ್ತಾರೆ. ತಮ್ಮ ಮಕ್ಕಳಲ್ಲೂ ಅಂಥದ್ದೇ ನಂಬಿಕೆ ಮೌಲ್ಯಗಳನ್ನು ಬೆಳೆಸುತ್ತಾ ಸಾಮಾಜೀಕರಿಸುತ್ತಾರೆ. ಈ ಲಿಂಗತಾರತಮ್ಯದ ಮೊದಲ ಪಾಠಶಾಲೆ ಮನೆಯೇ ಆಗಿ, ಮೊದಲ ಗುರುವು ಜನನಿಯೇ ಆಗಿರುವುದೊಂದು ದೊಡ್ಡ ವಿಪರ್ಯಾಸ. ಪುರುಷ ಪ್ರಧಾನ ಸಂಸ್ಕೃತಿಯ ಪ್ರಮುಖ ಸಂರಕ್ಷಕಿಯರು ಸ್ತ್ರೀಯರೇ ಆಗಿದ್ದಾರೆ.

ಸಿಮೊನ್ ದ ಬೋವಾ '' ಲಿಂಗ ಪ್ರಭೇಧವು ಮನೋವ್ಯಾಪಾರಗಳ ಮೂಲಕ ಪೀಳಿಗೆಯಿಂದ ಪೀಳಿಗೆಗೆ ರವಾನೆಯಾಗುತ್ತಾ ಸಾಂಸ್ಕೃತಿಕವಾಗಿ ಬೆಳೆಯುತ್ತ ಸಾಗುತ್ತದೆ ಭೂತಕಾಲವು ಭಿನ್ನವಲ್ಲ. ಹೀಗಿರುವಾಗ ಅವಳ ಭವಿಷ್ಯ ತಾನೇ ಹೇಗೆ ಭಿನ್ನವಾಗಲು ಸಾಧ್ಯ ? ತಾಯ್ತನ ಎಂಬ ಸ್ತ್ರೀ ವಿಶಿಷ್ಟ ಲಕ್ಷಣವೇ ಮಹಿಳೆಯರನ್ನು ಪುರುಷನಿಂದ ತೀರಾ ಪ್ರತ್ಯೇಕಿಸುವ ಅಂಶ. ಅದರ ಮೂಲಕವೇ ಮಹಿಳೆ ಮನೆಗೆಲಸಕ್ಕೆ ಬದ್ಧಳಾಗಿ ಉಳಿವ ಸ್ಥಿತಿ ಏರ್ಪಟ್ಟಿತ್ತು''[7] ಎಂದು ತನ್ನ ವಿಚಾರವನ್ನು ಮಂಡಿಸುತ್ತಾಳೆ.

ಕೌಟುಂಬಿಕ ಮತ್ತು ಸಾಮಾಜಿಕ ನಿರ್ಬಂಧಗಳಲ್ಲಿ ಮುರುಟಿ ಹೋದ ಹೆಣ್ಣಿನ ನಿಜವಾದ ಆಸಕ್ತಿ, ಆಸ್ಥೆ, ತೃಪ್ತಿಗಳೆಲ್ಲವನ್ನು ಪುರುಷ ಪ್ರಧಾನ ವ್ಯವಸ್ಥೆ ಮರೆಮಾಚಿಸಿದೆ.

ಬದಲಿಗೆ ಆದರ್ಶನಾರಿತ್ವದ ಮಾದರಿಗಳಷ್ಟೇ ಹೆಣ್ಣಿನ ಇತ್ಯಾತ್ಮಕ ಅನುಭವಗಳೆಂದು ನಿರ್ಧರಿಸುತ್ತದೆ. ಅವಳ ಅನುಭವ, ಚಿಂತನೆ, ಮನಸ್ಸು, ಬುದ್ಧಿಗಳನ್ನೆಲ್ಲಾ ಮೊಣಕಾಲ ಕೆಳಗೆಂದು ನಿರಾಕರಿಸುತ್ತದೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಗಂಡುಗುಣಗಳೇ ಶ್ರೇಷ್ಠವೆಂದು ಮೇಲುಗೈ ಪಡೆದಿರುತ್ತವೆ. ಇಂಥ ವ್ಯವಸ್ಥೆಯಲ್ಲಿ ಕಲಿಕೆ, ಆಸಕ್ತಿ, ಆಚಾರ ವಿಚಾರಗಳೆಲ್ಲ ಪುರುಷನದಾದಾಗ ಮೇಲು, ಸ್ತ್ರೀಯರದಾದಾಗ ಕೀಳು ಎಂದು ಶ್ರೇಣೀಕೃತವಾಗುತ್ತವೆ. ಇಂತಹ ಶ್ರೇಣೀಕರಣದಿಂದಾಗಿ ಮಹಿಳೆಯರ ಪ್ರತಿಭೆ, ವ್ಯಕ್ತಿತ್ವ, ವಿಕಾಸಗಳು ಮುರುಟಿ ಹೋಗುತ್ತವೆ.

ಈ ಜಗತ್ತಿನ ಒಳಿತು, ಕೆಡಕುಗಳ ಬಗ್ಗೆ ನಿರ್ಧರಿಸುವ ಅಧಿಕಾರವು ಪುರುಷನದೇ ಆಗಿದ್ದಾಗ, ಸ್ತ್ರೀಯರಿಗೆ ಯಾವುದು ಬೇಕು, ಯಾವುದು ಬೇಡವೆಂದು ನಿರ್ಧರಿಸುವವ ಅವನೇ ಆಗಿರುತ್ತಾನೆ. ಪುರುಷರ ಈ ಏಕದೃಷ್ಟಿಯ ಫಲವಾಗಿ ಮಹಿಳೆಯರು ತಮ್ಮ ದೃಷ್ಟಿಕೋನವನ್ನು ಕಳೆದುಕೊಂಡಿದ್ದಾರೆ. ಇದರಿಂದಾಗಿ ಹೆಂಗಸರ ಬುದ್ಧಿಮತ್ತೆ ಕೆಳದರ್ಜೆಯದೆಂದು ಪುರುಷರು ನಿರ್ಧರಿಸಲು ಕಾರಣವಾಗಿದೆ.

ಮೇರಿ ಎಲ್‌ಮನ್ ಎಂಬ ಪಾಶ್ಚಾತ್ಯ ಚಿಂತಕಿ ತನ್ನ 'Thinking about women' ಎಂಬ ಪುಸ್ತಕದಲ್ಲಿ ''ಲಿಂಗತಾರತಮ್ಯ ಎಂಬುದು ಬರೀ ಜೀವಶಾಸ್ತ್ರೀಯ ನೆಲೆಗೆ ಸೀಮಿತವಲ್ಲ. ಬದುಕಿನ ವಿದ್ಯಾಮಾನಗಳನ್ನು ಗ್ರಹಿಸುವ, ಅರ್ಥಮಾಡಿಕೊಳ್ಳುವ ರೀತಿಯಲ್ಲಿಯೇ ಲೈಂಗಿಕ ಸಾದೃಶ್ಯದ ಚಿಂತನಾ ಕ್ರಮವೂ ಮಹಿಳೆಯರು, ಪುರುಷರು ಜಗತ್ತನ್ನು ಕಾಣುವ ಬಗೆಯನ್ನು ಅವರ ಅನುಭವಗಳನ್ನು ಭಿನ್ನವಾಗಿ ರೂಪಿಸುತ್ತಿರುತ್ತದೆ.''[2] ಎಂಬ ವಿಚಾರವನ್ನು ಪ್ರತಿಪಾದಿಸಿದಳು.

ಅಂದರೆ ಸ್ತ್ರೀ-ಪುರುಷರಲ್ಲಿ ಅಂತರ್ಗತವಾಗಿರುವ ಲಿಂಗತ್ವ ಆಧಾರಿತ ಮಾನಸಿಕ ರೂಢಿಯಿಂದಾಗಿ ಅವರು ತಮ್ಮ ಲಿಂಗತ್ವದ ಮೂಲದ ಅಭಿಪ್ರಾಯಗಳನ್ನು ಹೊರಜಗತ್ತಿಗೆ ಆರೋಪಿಸುತ್ತಾರೆ. ಅಂದರೆ ಗಂಡು/ಹೆಣ್ಣಿನ ಆಲೋಚನಾ ಕ್ರಮವೇ ದೇಹದ ಮುಖಾಂತರ ನಡೆಯುತ್ತದೆ (body to mind). ಇಂಥ ಯೋಚನಾ ಕ್ರಮವೇ ತರ್ಕಹೀನ ಹಾಗೂ ಅರ್ಥಹೀನ ಎಂಬುದನ್ನು ಬಯಲಿಗೆಳೆಯುವುದು ಮೇರಿ ಎಲ್‌ಮನ್‌ಳ ಬಹಳ

ಮುಖ್ಯ ಉದ್ದೇಶ.[೩] ಹೌದು ನಮ್ಮ ದೇಹದ ಮುಖಾಂತರವೇ ನಮ್ಮ ಎಲ್ಲಾ ಆಲೋಚನನೆಗಳು, ಗ್ರಹಿಕೆಗಳು ನಡೆಯುತ್ತಿದ್ದರೆ ಲಿಂಗಾತೀತವಾದ ಮಹತ್ವದ ಕಲ್ಪನೆ ಸಾಧ್ಯವಾಗುತ್ತದೆಯೇ?

ನಮ್ಮ ಪರಿಕಲ್ಪನೆಗಳು ಮತ್ತು ನಮ್ಮ ಜ್ಞಾನ ಎರಡು ನಮ್ಮ ಜೀವನಾನುಭವಗಳಿಂದಲೇ ಪ್ರತೀತಗೊಳ್ಳುವಂಥವುಗಳು. ಪ್ರಜ್ಞೆಯು ಸಾಮಾಜಿಕತೆಯನ್ನು ರೂಪಿಸುತ್ತದೆಯೇ? ಅಥವಾ ಸಾಮಾಜಿಕ ಇರುವಿಕೆಯೆ ಪ್ರಜ್ಞೆಯ ಸ್ವರೂಪ ಎಂಥದೆಂದು ನಿರ್ಧರಿಸುತ್ತದೆಯೇ? ಎಂಬ ಪ್ರಶ್ನೆಗೆ, ಪ್ರಜ್ಞೆಯು ಜಗತ್ತನ್ನು ಹೇಗೆ ಗ್ರಹಿಸುತ್ತದೆಯೋ ಅದೇ ಅದರ ಸ್ವರೂಪವಾಗಿರುತ್ತದೆ ಎಂದಷ್ಟೇ ಉತ್ತರ ಹೇಳಬಹುದು.

'ನೀನೊಬ್ಬಳು ಹೆಂಗಸ್ಸಾದ್ದರಿಂದಲೇ ಹೀಗೆ ಯೋಚಿಸ್ತೀಯಾ', 'ಎಲ್ಲೋಗುತ್ತೆ ಹೆಂಗಸ್ರು ಬುದ್ದಿ' ಎಂಬಂತಹ ಮಾತುಗಳ ಹಿಂದಿರುವ ಐಡಿಯಾಲಜಿಗಳನ್ನು ಗಮನಿಸಿದರೆ ಸಮಾಜದಲ್ಲಿ ಪ್ರಜ್ಞೆಯ ಸ್ವರೂಪವನ್ನು ನಿರ್ಧರಿಸುವವನು ಗಂಡೇ ಎಂದು ತಿಳಿಯುತ್ತದೆ. ಆದದ್ದಿಂದ ಅವನ ವಿಚಾರಗಳು ಖಚಿತವಾಗಿರುತ್ತವೆ, ತರ್ಕ, ನಿಕಟವಾಗಿರುತ್ತವೆ. ಬೌದ್ಧಿಕ ಮಟ್ಟದ್ದಾಗಿರುತ್ತದೆ. ಅವನೇ ವಿಚಾರಗಳನ್ನು ಸಾಬೀತುಪಡಿಸಿ ನಿರ್ಧಾರ ಕೈಗೊಳ್ಳುವವನಾಗಿರುತ್ತಾನೆ. ಗಂಭೀರ ವಿಚಾರಗಳ ಚರ್ಚೆಕೂಡ ಅವನ ವಲಯವೇ ಆಗಿರುತ್ತದೆ.

''ಮಹಿಳೆಗೆ ಪುರುಷ ಸಹಜ ತರ್ಕದ ಬಳಕೆ ಗೊತ್ತಿಲ್ಲ, ಅಗತ್ಯ ಬಿದ್ದಾಗಲೂ ಆಕೆ ಪುರುಷನಂತೆ ತಾರ್ಕಿಕಳಾಗಲಾರಳು''[೪] ಎಂದು ಸ್ಟೆಂಡಲ್ ಅಭಿಪ್ರಾಯ ಪಡುತ್ತಾನೆ. ಸಂತ ಅಗಸ್ಟೀನ್ ಕೂಡ '' ಹೆಂಗಸು ಖಚಿತ ನಿಲುವಿನವಳೂ ಅಲ್ಲ, ಸ್ಥಿರ ಬುದ್ಧಿಯವಳೂ ಅಲ್ಲ''[೫] ಎಂದು ತೀರ್ಮಾನಕ್ಕೆ ಬರುತ್ತಾನೆ. ತರ್ಕ ಪರಿಕರಗಳು ಅಡುಗೆ ಮಾಡಲು, ಅಳುವ ಮಕ್ಕಳನ್ನು ಸುಮ್ಮನಿರಿಸಲು ನೆರವಾಗುತ್ತವೆಯೇ? ಎಡೆಬಿಡದ ಗೃಹಕೃತ್ಯಗಳ ಸಾಹಸದಲ್ಲೇ ಅವಳ ಶಕ್ತಿಗುಂದಿ, ಬುದ್ಧಿಮಂಕಾಗಿ, ಚುರುಕುತನ ಕಳೆದುಕೊಂಡರೆ ಆಶ್ಚರ್ಯವೇನೂ ಇಲ್ಲ. ಗೃಹಕೆಲಸದಲ್ಲಿ ಬಂದಿತಳಾದ ಮಹಿಳೆಗೆ ವಾಸ್ತವದಲ್ಲಿ ತರ್ಕಕ್ಕೆ ಅವಕಾಶ ಒದಗಿರುವುದಿಲ್ಲ. ಯಾವ ಗುರಿಯೂ ಇಲ್ಲದ ಅವಳ ಆಲೋಚನೆಗಳಿಗೆ ಗಂಡಸರ ಲೋಕದಲ್ಲಿ ಬೆಲೆಯೂ ಇಲ್ಲ. ತನ್ನ ಮಿತಿಯಾಚೆಗಿನ ವಲಯದ ರಹಸ್ಯವನ್ನು ಅರಿಯಲು ಕೂಡ ಎಷ್ಟೋ

ಶತಮಾನಗಳ ಕಾಲ ಅವಳ ಕಿಂಚಿತ್ತು ಪ್ರಯತ್ನವೂ ಪಟ್ಟಿರಲಿಲ್ಲ. ಆದ್ದರಿಂದ ಪುರುಷನ ಅನುಭವ ಗ್ರಹಿಕೆ, ಆಲೋಚನೆ, ತಾತ್ವಿಕತೆಗಳಿಗಿಂತ ಸ್ತ್ರೀಯರು ಭಿನ್ನವಾಗುಳಿದಿದ್ದರು.

ಕೌಟುಂಬಿಕ ಶ್ರಮವಿಭಜನೆಯಲ್ಲಿ ಮತ್ತು ಉದ್ಯೋಗ ಕ್ಷೇತ್ರದಲ್ಲಿ ಮಹಿಳೆಯರನ್ನು ಪ್ರತ್ಯೇಕಗೊಳಿಸುವ ಮುಖಾಂತರವೇ ಪುರುಷರು ಸ್ತ್ರೀಯರನ್ನು ಭೌತಿಕವಾಗಿ, ತಾತ್ವಿಕವಾಗಿ ಆಳುತ್ತಿದ್ದರು. ಅವಳಿಗೂ ಕೂಡ ಯಾವುದೇ ನಿರ್ಬಂಧಗಳನ್ನು ವಿಧಿಸದೆ ಸಮಾನಾವಕಾಶಗಳನ್ನು ನೀಡಿದ್ದರೆ ಅವಳು ಕೂಡ ತಾತ್ವಿಕವಾಗಿ ಪುರುಷನಿಗೆ ಸರಿಸಮಾನವಾಗಿರುತ್ತಿದ್ದಳು. ಅದಕ್ಕೆ ಬದಲಾಗಿ ಅವಳನ್ನು ನಾಲ್ಕು ಗೋಡೆಗಳ ಗೃಹ ಬಂಧನದಲ್ಲಿ ಬಂಧಿಸಿದರೆ ಅವಳ ಜ್ಞಾನವಲಯ ವಿಸ್ತಾರವಾಗದುವುದಾದರೂ ಎಂತು?

ಆದರೆ ಇಂದು ಈ ಪರಿಸ್ಥಿತಿ ಬದಲಾಗಿದೆ, ಮಹಿಳೆ, ಪುರುಷನಿಗೆ ಸಮಾನವಾಗಿ ಶಿಕ್ಷಣ ಮತ್ತು ಉದ್ಯೋಗದ ಕ್ಷೇತ್ರಗಳಲ್ಲಿ ಭಾಗವಹಿಸುತ್ತಿರುವುದರಿಂದ ಅವಳ ಹಿಂದಿನ ಪರಿಸ್ಥಿತಿ ಇಂದಿಲ್ಲ. ಅಲ್ಲದೆ ಆಧುನಿಕ ತಂತ್ರಜ್ಞಾನದಿಂದಾಗಿ ಈಗ 'ಒಳಗೆ' ಮತ್ತು 'ಹೊರಗೆ' ಕಲ್ಪನೆಗಳು ಬದಲಾಗಿವೆ. ಮನೆಯ ಒಳಗಿದ್ದುಕೊಂಡೇ ಪ್ರಪಂಚದ ಎಲ್ಲಾ ವಿದ್ಯಾಮಾನಗಳನ್ನು ತಿಳಿಯಲು ಸಾಧ್ಯ. ಎಲ್ಲಾ ಚಟುವಟಿಕೆಗಳಲ್ಲೂ ಪುರುಷನಿಗೆ ಸರಿ ಸಮಾನವಾಗಿ ಭಾಗವಹಿಸಲು ಕೂಡ ಸಾಧ್ಯವಾಗಿದೆ. ಇಂದು 'ಅಡುಗೆ ಮನೆ' ಕಲ್ಪನೆ ಕೇವಲ ಮಕ್ಕಳ ಪಾಲನೆ ಪೋಷಣೆಗಳಗಷ್ಟೇ ಸೀಮಿತವಾಗಿಲ್ಲ.

ಮಹಿಳೆ ಏನು ? ಏನಾಗಿದ್ದಾಳೇ ? ಅವಳ ಜ್ಞಾನದ ಸ್ವರೂಪವೇನು? ಎಂಬುದನ್ನು ಪ್ರಶ್ನಿಸಿಕೊಳ್ಳುವುದಾದರೆ, ಹೆಣ್ಣು ಜಗತ್ತನ್ನು ಗ್ರಹಿಸುವ ಕ್ರಮ, ಬದುಕಿನ ಅನುಭವಗಳನ್ನು ಪಡೆಯುವ ಕ್ರಮಗಳೆಲ್ಲವೂ ಪುರುಷನಿಗಿಂತ ಭಿನ್ನವೇ ಆಗಿರುತ್ತವೆ. ವ್ಯಕ್ತಿ ಸ್ವಾತಂತ್ರ್ಯ ಅವಳಿಗೆ ಅಪರಿಚಿತ. ಹಿಂದೆ ಅವಳಿಗೊಂದು ವ್ಯಕ್ತಿತ್ವವಿದೆ ಎಂದು ಕೂಡ ತಿಳಿಯಲಾಗಿರಲಿಲ್ಲ. ವ್ಯಕ್ತಿತ್ವವನ್ನು ವಿವರಿಸಿಕೊಳ್ಳುವುದಾದರೂ ಹೇಗೆ? ಮನುಷ್ಯರ ವ್ಯಕ್ತಿತ್ವದ ಸ್ವರೂಪ ಯಾವುದು ? ಪ್ರಧಾನಕ್ಕೆ ಮಾತ್ರ ವ್ಯಕ್ತಿತ್ವವಿದೆಯೇ ? ಅಧೀನಕ್ಕೆ ವ್ಯಕ್ತಿತ್ವವಿಲ್ಲವೆ?

'ನನಗೇನೂ ಗೊತ್ತಾಗುತ್ತೆ ನಮ್ಮ ಯಜಮಾನ್ರನ್ನ ಕೇಳಬೇಕು', 'ಹೆಣ್ಣೆಂಗ್ಸು ನನಗೇನು ಗೊತ್ತಾಗುತ್ತೆ' ಎಂಬಂತಹ ಮಾತುಗಳನ್ನು ಗಮನಿಸಿದರೆ ಹೆಣ್ಣು

ಸಂಪೂರ್ಣವಾಗಿ ಗಂಡಿನಿಂದ ನಿರ್ಧಾರಿತಳಾಗುತ್ತಿದ್ದಾಳೆ ಎಂದು ತಿಳಿಯುತ್ತದೆ. ಆಕೆ ಸದಾ ಲಿಂಗ ಸಂಬಂಧಿಯಾಗಿಯೇ ನಿರ್ವಚಿತಳಾಗುತ್ತಿದ್ದಾಳೆ. ಇರುವ ಪುರುಷ ಜಗತ್ತನ್ನು ಆಕೆ ಕೌಶಲ್ಯ ಬಲವಾದ ತರ್ಕ ಮತ್ತು ಅರಿವಿನ ಮೂಲಕ ತನ್ನ ಗ್ರಹಿಕೆಯ ವ್ಯಾಪ್ತಿಗೆ ತಂದುಕೊಳ್ಳಲಾರಳು ಎಂಬ ನಂಬಿಕೆ ಇದೆ. ಏಕೆಂದರೆ ತರ್ಕ, ತಂತ್ರಗಳನ್ನು ಬಳಸಲು ಅವಳಿಗೆ ಹಿಂದೆಂದು ಅವಕಾಶಕೊಟ್ಟಿಲ್ಲ. ಆದ್ದರಿಂದ ಆಕೆಗೂ ಲೋಕಕ್ಕೂ ನಡುವೆ ಪುರುಷ ಮಧ್ಯವರ್ತಿಯಾಗುವ ಅಗತ್ಯ ಬಿದ್ದಿದೆ.

ಆಗ ಧರ್ಮ, ರಾಜಕೀಯ, ಯುದ್ಧ, ಆರ್ಥಿಕ ವ್ಯವಸ್ಥೆ ಮುಂತಾದ ವಿಚಾರಗಳು ಸ್ತ್ರೀಯರ ಬೌದ್ಧಿಕ ಸಾಮರ್ಥ್ಯಕ್ಕೂ, ಅವರ ಸೃಜನಶೀಲ ಪ್ರತಿಭೆಗೂ ಒಗ್ಗುವಂತಥವಲ್ಲ ಅಥವಾ ಮೀರಿದಂಥವುಗಳು ಎಂದು ವ್ಯವಸ್ಥೆ ನಿರ್ಧರಿಸಿಬಿಡುತ್ತದೆ. ಗಂಡು-ಹೆಣ್ಣುಗಳ ವಲಯಗಳ ಗುರುತಿಸುವಿಕೆ ಗುಣ, ಪಾತ್ರ, ವೈಶಿಷ್ಟ್ಯಗಳ ಸ್ಥಾಪಿಸುವಿಕೆಗಳಿಂದಲೇ ಸಾಧ್ಯವಾಗುವುದು. ಒಂದು ಲಿಂಗವರ್ಗದ ವರ್ತನೆಯನ್ನು ಟೀಕಿಸುವುದು ಇನ್ನೊಂದರ ವರ್ತನೆಯನ್ನು ಸಮರ್ಥಿಸಿಕೊಳ್ಳಲೆಂದೇ. ನಮ್ಮ ಸಂದರ್ಭದ ಮತ್ತೊಂದು ಹಾಸ್ಯಾಸ್ಪದ ವಿಚಾರವೆಂದರೆ ಅವಳಿಗೆ ಲೌಕಿಕವಾಗಿ ಹೀನಸ್ಥಾನ, ಆಧ್ಯಾತ್ಮಿಕವಾಗಿ ಉನ್ನತ ಸ್ಥಾನಮಾನವಿದೆ.

ಈಗ ನಮ್ಮ ಮುಂದಿರುವ ಪ್ರಶ್ನೆ ಎಂದರೆ ಇದೇ ಪರಿಸ್ಥಿತಿ ಮುಂದುವರೆಯಬೇಕೆ? ಹೆಣ್ಣಿಗೆ ಸ್ವಂತ ಆಲೋಚನಾ ಸಾಮರ್ಥ್ಯವಿಲ್ಲವೇ? ಅವಲಂಬಿತ ಸ್ಥಿತಿಯಲ್ಲಿದ್ದು ಕೊಂಡೇ ಬಿಡುಗಡೆಯನ್ನು ಪಡೆದುಕೊಳ್ಳುವುದೆಂತು ? ಎಂಬುದು.

ಸ್ತ್ರೀವಾದಿಗಳು ಸೂಚಿಸುವ ಕೆಲವು ಬಿಡುಗಡೆಯ ಹಾದಿಗಳನ್ನು ಅನುಮಾನ ಗಳಿಂದಲೇ ನೋಡಬೇಕಾಗುತ್ತದೆ. ಏಕೆಂದರೆ ಎಲ್ಲಾ ಬಗೆಯ ಪುರುಷ ತಾತ್ವಿಕತೆ ಮತ್ತು ಸೈದ್ಧಾಂತೀಕರಣವನ್ನು ವಿರೋಧಿಸುವುದು ಸ್ತ್ರೀವಾದದ ಒಂದು ಪ್ರಮುಖ ಲಕ್ಷಣವೆನಿಸಿದೆ. ಸ್ತ್ರೀಯರ ಬದುಕನ್ನು ಅದರ ಅರ್ಥವನ್ನು ಸ್ತ್ರೀಯರೇ ನಿರ್ಣಯಿಸುವ ಅಧಿಕಾರವನ್ನು ಹೊಂದಿರಬೇಕೆಂದು ಪ್ರತಿಪಾದಿಸುವ ಇವರು ಪುರುಷಾಧಿಕಾರದ ವಿರುದ್ಧ ಪ್ರತಿಭಟಿಸುವ ಒಂದು ಮುಖ್ಯ ವಿಧಾನವಾಗಿ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಯರನ್ನು ಅವಹೇಳನ ಗೊಳಿಸುವಂತಹ ಎಲ್ಲಾ ವರ್ತನೆ, ಸ್ವಭಾವ, ಗುಣಗಳನ್ನು ಧನಾತ್ಮಕವಾಗಿ ಪ್ರಬಲಗೊಳಿಸಿ ಚಿತ್ರಿಸುವ ರೀತಿಯೊಂದನ್ನು ಆರಂಭಿಸಿದ್ದಾರೆ.

ಜೀವಶಾಸ್ತ್ರೀಯವಾದ ಹೆಣ್ತನವೇ ಬೇರೆ ಸಾಂಸ್ಕೃತಿಕ ರಚನೆಯಾದ ಸ್ತ್ರೀ ಸ್ವಭಾವ ಎಂಬುದೇ ಬೇರೆ ಎಂದು ಎಣಿಸದೆ ತಾಯ್ತನ, ಪಾತಿವ್ರತ್ಯ ಮುಂತಾದ ಹೆಣ್ತನದ ವಿಚಾರಗಳ ವೈಭವೀಕರಣಕ್ಕೆ ತೊಡಗಿದರು. ತಾಯ್ತನ ಎಂಬುದು ಸಾಮಾಜಿಕ ಚಟುವಟಿಕೆ ಅಲ್ಲ. ಅದೊಂದು ನೈಸರ್ಗಿಕ ವಿದ್ಯಾಮಾನ. ಲಿಂಗಾಧಾರಿತ ಪ್ರತ್ಯೇಕತೆಗಳು ಎಲ್ಲಿಯವರೆಗೆ ಎತ್ತಿ ಹಿಡಿಯಲ್ಪಡುತ್ತವೆಯೋ ಅಲ್ಲಿಯವರೆಗೆ ಸ್ತ್ರೀ ವಿಮೋಚನೆಯ ಪ್ರಶ್ನೆ ಹಾಗೆಯೇ ಉಳಿದುಬಿಡುತ್ತದೆ.

ಪುರುಷ ಮೂಲದ ಚಿಂತನೆಗಳು ಪುರುಷನನ್ನು ಜ್ಞಾನದ ಕೇಂದ್ರ ಬಿಂದುವಾಗಿಟ್ಟು ಆತನ ಸುತ್ತಲೂ ಶ್ರೇಣೀಕೃತ ವೈರುಧ್ಯಗಳನ್ನು, ತತ್ವ ಚಿಂತನೆಯನ್ನು ಬೆಳೆಸಿಟ್ಟವೆ. ಇಂತಹ ವಿರೋಧಗಳನ್ನು ಒಡೆದು ನಿರಚಿಸುವ ಮೂಲಕ ಅವು ಸ್ಥಾಪಿಸುವ ವ್ಯವಸ್ಥೆಯನ್ನೇ ಬುಡಮೇಲು ಮಾಡಲು ಸಾಧ್ಯ. ಹೀಗೆ ಮಾಡಿದಾಗ ಪುರುಷ x ಸ್ತ್ರೀ ಎಂಬ ಅವಳಿ ವೈರುಧ್ಯಗಳಲ್ಲಿನ ಶ್ರೇಣೀಕೃತತೆಯನ್ನು ಇಲ್ಲವಾಗಿಸಬಹುದೆಂಬ [6] ಡೆರಿಡನ 'Deconstruction Theory' ಯನ್ನು ಆಧರಿಸಿದ ಸ್ತ್ರೀವಾದಿಗಳಿಗೆ ಒಂದು ಪ್ರಶ್ನೆ ಕೇಳುವುದಾದರೆ;

ಎಲ್ಲಾ ತಾತ್ವಿಕತೆಗಳಿಂದ ಮುಕ್ತವಾಗಿರುವ ವಸ್ತುನಿಷ್ಟವಾದ ನೆಲೆಯಿಂದ ಮಾತನಾಡಲು ಸಾಧ್ಯವೇ ? ಇಲ್ಲ ಸಾಧ್ಯವಾಗುವುದಿಲ್ಲ ಇದೊಂದು ಮಿಥ್ಯಾಕಲ್ಪನೆ. ಏಕೆಂದರೆ ಒಂದು ತಾತ್ವಿಕತೆಯಿಂದ ಮುಕ್ತವೆಂದುಕೊಂಡರು ಅದರ ವಿರುದ್ಧವಾದ ಮತ್ತೊಂದು ತಾತ್ವಿಕ ನೆಲೆಯನ್ನು ಅವು ಸಮರ್ಥಿಸುತ್ತಿರುತ್ತವೆ.

ಸ್ತ್ರೀವಾದಿಗಳು 'ಹೆಣ್ಣುತನ', 'ಗಂಡುತನ'ಗಳನ್ನು ಪ್ರತ್ಯೇಕಿಸುವುದನ್ನೇ ಅತಿರೇಕಕ್ಕೆ ಕೊಂಡೊಯ್ದು 'ಸ್ತ್ರೀತ್ವ' ಕ್ಕೆ ಲಕ್ಷಣವೊಂದನ್ನು ನಿರ್ವಚಿಸಲು ಯತ್ನಿಸುತ್ತಾರೆ. ಆದರೆ ಪುರುಷರಿಗೂ, ಸ್ತ್ರೀಯರಿಗೂ ಸುಪ್ತಪ್ರಜ್ಞೆಯ ನೆಲೆಯೊಂದಿದೆ ಅದು ಉಳಿದೆಲ್ಲವನ್ನು ಪ್ರಭಾವಿಸುತ್ತಿರುತ್ತದೆ ಎಂಬ ಅರಿವಿಗೆ ನಮ್ಮ ಚರ್ಚೆಗಳಲ್ಲಿ ಅಷ್ಟಾಗಿ ಗಮನ ನೀಡುವುದಿಲ್ಲ. ಕುಟುಂಬ ಇಲ್ಲವಾದಲ್ಲಿ ಅಥವಾ ತಾಯ್ತನದ ತಿರಸ್ಕಾರದಿಂದಾಗಿ ಹೆಣ್ಣು ಸಂಪೂರ್ಣ ಬಿಡುಗಡೆ ಹೊಂದುತ್ತಾಳೆಂದು ಹೇಳಲು ಸಾಧ್ಯವಾಗದು. ಏಕೆಂದರೆ ಮಹಿಳೆ ಲೋಕದ ಮೇಲೆ ಗಂಡಸ್ಸಿನಷ್ಟು ಹಿಡಿತವನ್ನು ಸಾಧಿಸಲು ಇನ್ನು ಸಾಧ್ಯವಾಗಿಲ್ಲ.

ಸ್ತ್ರೀವಾದ ಎಂಬುದು ಕೇವಲ ವಿಷಯಗಳ ಪಟ್ಟಿಯಲ್ಲ. ಏಕೆಂದರೆ ಸ್ತ್ರೀವಾದ ಎಂದರೆ ನಮ್ಮ ಸಂಸ್ಕೃತಿಯ ವಿಮರ್ಶೆಯೇ ಆಗುತ್ತದೆ. ಸ್ವತಂತ್ರವಾದ ಹೆಂಗಸು ತನ್ನನ್ನು ಗಂಡಸಿಗೆ ಹೋಲಿಸಿಕೊಂಡು ತನ್ನ ಅಡೆತಡೆಗಳನ್ನು ಗುರುತಿಸಿಕೊಳ್ಳುತ್ತಾಳೆ. ಇದು ನಿಜಕ್ಕೂ ಸ್ವಾತಂತ್ರ್ಯದ ಕಲ್ಪನೆಯೇ ? ಖಂಡಿತವಾಗಿಯೂ ಅಲ್ಲ. ಇದು ಸ್ವಾತಂತ್ರ್ಯ ಎಂಬ ಭ್ರಮಾಪಾನ ಅಷ್ಟೇ. ಹೆಂಗಸು ಸ್ವತಂತ್ರವಾಗುವುದೆಂದರೆ ಗಂಡಿನಂತಾಗುವುದೇ? ಅಥವಾ ಗಂಡು, ಹೆಣ್ಣಿಗೆ ಸಮಾನ ಸ್ಥಾನಕೊಡುವುದೆಂದರೆ ಹೆಣ್ಣಿನಂತಾಗುವುದೇ ? ಇದು ನಿಜವಾಗಿಯೂ ಸ್ವಾತಂತ್ರ್ಯದ ಕಲ್ಪನೆಯಲ್ಲ. ಒಂದು ಪಾತ್ರದಿಂದ ಮತ್ತೊಂದು ಪಾತ್ರಕ್ಕೆ ಶಿಫ್ಟ್ ಆಗುವುದು ಅಷ್ಟೇ. ಗಂಡು, ಹೆಣ್ಣು ಇಬ್ಬರೂ ದೇಹದ ಮೂಲಕ ಚಿಂತಿಸುವ ಕ್ರಮವನ್ನು ಸಂಪೂರ್ಣವಾಗಿ ಬಿಡುವ ತನಕ ಸ್ವಾತಂತ್ರ್ಯದ ಕಲ್ಪನೆ ಸಫಲವಾಗದು.

ಮಹಿಳೆಯರು ಈಚೆಗಷ್ಟೇ ಎಲ್ಲಾ ಕ್ಷೇತ್ರಗಳಲ್ಲಿಯೂ ಪಾಲುದಾರರಾಗುತ್ತಿದ್ದಾರೆ. ಸಮಾನತೆಯ ಕಲ್ಪನೆ ಸರ್ವವ್ಯಾಪಿಯಾದಾಗ ಮಾತ್ರ ಇಬ್ಬರಿಗೂ ಅನ್ವಯವಾಗುವ ತಾತ್ವಿಕವಾಗಿ ಮಹತ್ವವುಳ್ಳ ಸಿದ್ಧಾಂತವೊಂದು ಹೊಮ್ಮಿ ಬರಲು ಸಾಧ್ಯ. ಅಲ್ಲಿಯವರೆಗೂ ಈಗಿರುವ ಪಿತೃಪ್ರಧಾನ ತಾತ್ವಿಕತೆಯೊಳಗೇ ಸ್ತ್ರೀಯರ ತಾತ್ವಿಕತೆಯು ಪ್ರಕಟ ವಾಗುತ್ತಿರುತ್ತದೆ. ಸ್ತ್ರೀವಾದಿ ತಾತ್ವಿಕತೆ ಎಂಬುದು ಕೇವಲ ಹೆಣ್ಣಿನ ಅನುಭವಗಳ ಕಥನವಲ್ಲ. ಆ ಅನುಭವವನ್ನು ನೋಡುವ ಒಂದು ವಿಧಾನ. ಹೆಣ್ಣಿಗೆ ಸ್ವಂತ ವ್ಯಕ್ತಿತ್ವವನ್ನು ಹಿಂದೆಂದೂ ನೀಡಿಲ್ಲ ಎಂದು ಕಿರುಚುವುದಕ್ಕಿಂತ ಮೊದಲು ತನ್ನದಾದಂತಹ ಒಂದು ಹೊಸ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕು. ರೂಪಿಸಿಕೊಳ್ಳುತ್ತಿದ್ದಾಳೆ. ಪ್ರತಿರೋಧಕ್ಕಿಂತ ಹೆಚ್ಚಿನ ಒತ್ತು ಸ್ವಾಯತ್ತ ಶಕ್ತಿಯ ಬಗ್ಗೆ ಇರಬೇಕು.

ವ್ಯಕ್ತಿತ್ವವು ತನ್ನ ಪರಿಪೂರ್ಣತೆಗಾಗಿ ಮಿತಿಗಳನ್ನು ಮೀರಬಯಸುವುದು ಗಂಡು/ ಹೆಣ್ಣು ಇಬ್ಬರಿಗೂ ಸಮಾನವಾದುದು. ಈ ಪ್ರಜ್ಞಾವಂತಿಕೆ ಸ್ತ್ರೀಯರದಷ್ಟೇ ಅಲ್ಲದೆ ಪುರುಷರಲ್ಲಿಯೂ ಎಚ್ಚರಗೊಳ್ಳಬೇಕಿದೆ. ಆದ್ದರಿಂದ ''ಸ್ತ್ರೀ-ಪುರುಷರಿಬ್ಬರಿಗೂ ಸಮಾನವಾಗಿ ತಮ್ಮ ವ್ಯಕ್ತಿತ್ವದ ಸಮಗ್ರತೆಗೇರುವ ಅವಕಾಶ ಬೇಕೆನ್ನುವ ವಿಶಾಲ ಕಾಳಜಿಯು ಸ್ತ್ರೀ-ಪುರುಷರಿಬ್ಬರದೂ ಆಗಬೇಕು.'[2] ಎನ್ನುವ ಸುಮಿತ್ರಾಬಾಯಿಯವರ ನಿಲುವು ಬಹಳ ಮಹತ್ವವಾದದ್ದು.

ಸಂಸ್ಕೃತಿಯ ತಾತ್ವಿಕತೆ ಮತ್ತು ಸಂಕೇತಗಳಲ್ಲಿ ಬೇರೂರಿದ ಪುರುಷಾಧಿಕಾರದ ಸ್ವರೂಪಗಳನ್ನು ಬಯಲಿಗೆಳೆದು ಅವುಗಳನ್ನು ವಿಮರ್ಶೆಗೆ ಒಳಪಡಿಸಿ ಅವುಗಳ ವಾಸ್ತವ ರೂಪದ ಬಗ್ಗೆ ಸ್ತ್ರೀ ಪುರುಷ ಇಬ್ಬರಲ್ಲೂ ಪ್ರಜ್ಞಾವಂತಿಕೆಯನ್ನು ಬೆಳೆಸುವುದು ಸ್ತ್ರೀವಾದದ ಗುರಿಯಾಗಬೇಕು.

**ಹೆಂಗಸು ಹರಟೆಮಲ್ಲಿಯೇ ?**



ದಂಪತಿಗಳಲ್ಲಿ ಹೆಣ್ಣು ಗಂಡಿಗಿಂತ ಹೆಚ್ಚು ಒಂಟಿತನವನ್ನು ಅನುಭವಿಸುತ್ತಾಳೆ. ಅವನದು ಹೊರಜಗತ್ತಾದ್ದರಿಂದ ಅವನಿಗೆ ಸಖ್ಯ ಎಲ್ಲೆಡೆ ದೊರೆಯುತ್ತದೆ. ಇವಳಿಗೆ ಮನೆ ಬಿಟ್ಟರೆ ಬೇರೆ ಇಲ್ಲ. ಜೊತೆಗೆ ಅಪರಿಚಿತರ ಜೊತೆ ಮಾತನಾಡುವ ಅವಕಾಶವೂ ಇಲ್ಲ. ಆಗ ಆಕೆಗೆ ಕೌಟುಂಬಿಕ ವಲಯದ ಚಿಕ್ಕ ಚಿಕ್ಕ ಸಂಗತಿಗಳೇ ಮುಖ್ಯವೆಂದು ತೋರುತ್ತವೆ. ಏಕೆಂದರೆ ಗಹನವಾದುದರಿಂದ ಅವಳನ್ನು ದೂರವಿಡಲಾಗಿದೆ. ಅಲ್ಲದೆ ಆಕೆಗೆ ಪ್ರತಿದಿನ ಎದುರಾಗುವ ನಿರರ್ಥಕಗಳಿಗೆಗಳನ್ನು ಹೇಗೆ ಎದುರಿಸಬೇಕು ಎಂಬುದೇ ಅವಳ ಮುಖ್ಯ ಪ್ರಶ್ನೆಯಾಗಿರುತ್ತದೆ. ಇದರಿಂದಾಗಿ ಅವಳು ಸೋಮಾರಿಯಂತೆ ಕಾಲಹರಣ ಮಾಡುವವಳಂತೆ, ಟಿ.ವಿ. ಸೀರಿಯಲ್‌ಗಳಿಗೆ ಅಂಟಿಕೊಂಡವಳಂತೆ ಕಾಣುತ್ತಾಳೆ.

ಹೆಂಗಸರು ಬಿಡುವಿನ ವೇಳೆಯಲ್ಲಿ ಒಟ್ಟಿಗೆ ಸೇರಿದಾಗ ಅಡಿಗೆ ವಿಚಾರ, ಸೀರೆ, ದೇವರು, ಸೌಂದರ್ಯದ ಸಲಹೆ, ಇತರರ ನಡವಳಿಕೆಯನ್ನು ಟೀಕಿಸುವುದು, ಗುಟ್ಟುಗಳನ್ನು ಹಂಚಿಕೊಳ್ಳುವುದು ಮುಂತಾದ ವಿಚಾರಗಳನ್ನು ಮಾತನಾಡುತ್ತಿರುತ್ತಾರೆ. ಈ ವಿಚಾರಗಳು ಪುರುಷರಿಗೆ ಅನಗತ್ಯವಾದ್ದರಿಂದ ಕೆಲಸಕ್ಕೆ ಬಾರದ ಹರಟೆ ಎಂದು ತೀರ್ಮಾನಿಸುತ್ತಾರೆ. ಇದನ್ನು ಟೀಕಿಸುವ ಅಗತ್ಯವಿಲ್ಲ. ಕಾರಣ ಅವರನ್ನ ಇರಿಸಿರುವ ಲೋಕದಲ್ಲಿ ಇರುವ ವಿಚಾರಗಳು ಇವು ಮಾತ್ರ. ಹರಟೆಯ ಸಮಯವೆ ಹೆಣ್ಣಿಗೆ ಗೃಹಕೃತ್ಯಗಳಿಂದ ಬಿಡುಗಡೆ ಪಡೆಯುವ ವಿರಾಮದ ಸಮಯ. ಇದು ಒಳಜಗತ್ತಿನ ಹರಟೆಯಾದರೆ, ಗಂಡಸರು ಕೂಡ ಹರಟೆ ಹೊಡೆಯುತ್ತಾರೆ. ಇದಕ್ಕೆ ಸಾಕ್ಷಿವೆತ್ತಂತೆ ಹಳ್ಳಿಗಳಲ್ಲಿ 'ಹರಟೆಕಟ್ಟೆ', 'ಸೋಮಾರಿಕಟ್ಟೆ'ಗಳು, ಕಾಲೇಜುಗಳಲ್ಲಿ 'ಅಡ್ಡ'ಗಳು ಪುರುಷರಿಗೆಂದೇ ಸೃಷ್ಟಿಯಾದ ತಾಣಗಳು.

ಆದರೆ ಅಲ್ಲಿ ಚರ್ಚಿತವಾಗುವ ವಿಚಾರಗಳು ಮಾತ್ರ ಬೇರೆ ಇರಬಹುದು ಅಷ್ಟೇ. ಹೆಂಗಸರು, ಗಂಡಸರಂತೆ ರಾಜಕೀಯ, ಪ್ರಚಲಿತ ವಿದ್ಯಮಾನಗಳಂತಹ ವೈಚಾರಿಕ ಚರ್ಚೆಗಳಲ್ಲಿ ತೊಡಗದೆ ಇರಬಹುದು. ಅಂದಮಾತ್ರಕ್ಕೆ ಅವರದು ಹರಟೆಯಲ್ಲ ಎಂದು ಹೇಳುವಂತಿಲ್ಲ. ಹರಟೆ ಗುಣ ಮನುಷ್ಯ ಸ್ವಾಭಾವಿಕ ಗುಣಗಳಲ್ಲೊಂದು. ಅದು ಹೆಣ್ಣಿನ ಭಾಷಿಕ ಲಕ್ಷಣ ಮಾತ್ರವಲ್ಲ.

ಇಂದು ಹೊರಜಗತ್ತಿಗೆ ಮಹಿಳೆಯರ ಪ್ರವೇಶವಾಗಿರುವುದರಿಂದ ವಿದ್ಯಾವಂತ ಮಹಿಳೆಯರು, ಪುರುಷನಿಗೆ ಸರಿಸಮಾನವಾಗಿ ವೈಚಾರಿಕ ಚರ್ಚೆಗಳಲ್ಲಿ ತೊಡಗುತ್ತಾರೆ. ಮಾನವ ಜೀವಿಗಳಿಗೆ ಸಮಾನವಾದ ಕಾರ್ಯಗೌರವದ ಹೊಣೆ ದೊರೆತಲ್ಲಿ ಆಕೆಯೂ ಕೂಡ ತನ್ನ ಕ್ರಿಯಾಶೀಲತೆಯನ್ನು, ಸಾಮರ್ಥ್ಯವನ್ನು ಗಂಡಸಿನಷ್ಟೇ ಪ್ರಮಾಣದಲ್ಲಿ ತೋರಿಸಬಲ್ಲಳು.

**ಪುರುಷನಿಗಿಂತ ಹೆಣ್ಣು ಹೆಚ್ಚು ಭಾವುಕಳೇ ?**

ಕೆಲವು ಸಂಗತಿಗಳಲ್ಲಿ ಸ್ತ್ರೀ, ಪುರುಷನಿಗಿಂತ ಖಂಡಿತವಾಗಿಯೂ ಭಿನ್ನಳು. ಇದಕ್ಕೆ ಆಕೆಯ ದೇಹರಚನೆಯ ಕೆಲವು ಅಂಶಗಳು ಸಹ ಕಾರಣಗಳಾಗಿವೆ. ಗಂಡಿಗಿಂತ ಹೆಣ್ಣಿನಲ್ಲಿ ಹಲವು ಗೌಣ ಗುಣಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಕೆಲವು ಹಾರ್ಮೋನುಗಳ ಉತ್ಪತ್ತಿ ಗಂಡಿಗಿಂತ ಹೆಣ್ಣಿನಲ್ಲಿ ಕಡಿಮೆ. ಆದ್ದರಿಂದ ಹೆಣ್ಣು ಕುಳ್ಳಗಿರುತ್ತಾಳೆ, ತೂಕ ಕಡಿಮೆ, ಮೂಳೆಗಳ ರಚನೆ ಕೂಡ ಸೂಕ್ಷ್ಮವಾಗಿರುತ್ತದೆ.

ಹೆಣ್ಣಿನ ಶ್ವಾಸಕೋಶ ಮತ್ತು ಶ್ವಾಸನಾಳಗಳು ಚಿಕ್ಕವು, ಧ್ವನಿಪೆಟ್ಟಿಗೆಯು ಕುಗ್ಗಿರುತ್ತದೆ. ಇದರಿಂದ ಆಕೆ ಜೋರಾಗಿ ಗಟ್ಟಿಯಾಗಿ ಮಾತನಾಡಲಾರಳು. ಈ ಜೈವಿಕ ಸಂಗತಿಗೆ ಸಾಮಾಜಿಕ ಕಟ್ಟಳೆಗಳನ್ನು ರೂಪಿಸಿ 'ಹೆಣ್ಣು ಹೆಂಗಸು ಎಷ್ಟು ಜೋರಾಗಿ ಮಾತನಾಡೋದು, ಮೆಲ್ಲಗೆ ಮಾತನಾಡು' ಎಂಬ ನಿಷೇಧಾತ್ಮಕ ಸಂಗತಿಗಳು ಸೃಷ್ಟಿಯಾದವು. ಅಭಾವಗಳಿಂದ ಮೌಲ್ಯಗಳು ಹುಟ್ಟುತ್ತವೆಯೋ ? ಅಥವಾ ಮೌಲ್ಯಗಳ ನಿರಾಕರಣೆಯಿಂದ ಅಭಾವಗಳಾಗುತ್ತವೆಯೋ ? ಸರಿಯಾಗಿ ಹೇಳಲು ಸಾಧ್ಯವಾಗುವುದಿಲ್ಲ.

ಮುಖಾಂತರ ಸಾಬೀತು ಪಡಿಸಿದರು. ಈ ಭಾಗಗಳಿಗೆ ಈ ವಿಜ್ಞಾನಿಗಳ ಹೆಸರುಗಳನ್ನೇ ನಾಮಕರಣ ಮಾಡಲಾಯಿತು. ಒಂದು ಬ್ರೋಕಾನ ವಾಕ್ ಸ್ತಂಭಂನ ಮತ್ತೊಂದು ವರ್ನಿಕೆಯ ವಾಕ್‌ಸ್ತಂಭನ.[೧೦]

ಸಾಮಾನ್ಯವಾಗಿ ಮೆದುಳಿನ ಕೆಲಸ ಕಾರ್ಯಗಳ ಬಗ್ಗೆ ನಾವು ಚರ್ಚಿಸುವಾಗ ಗಮನಿಸಬೇಕಾದ ಇನ್ನೊಂದು ಮುಖ್ಯ ಅಂಗರಚನೆಯ ಸಂಗತಿ ಎಂದರೆ ಎಡನಿಮ್ಮಿದಿಳು ದೇಹದ ಬಲಭಾಗದ ಮತ್ತು ಬಲನಿಮ್ಮಿದಿಳು ದೇಹದ ಎಡಭಾಗದ ಚಲನವಲನಗಳಿಗೆ ಕಾರಣವಾಗಿ ಆಯಾ ದೇಹ ಭಾಗಗಳ ವಿವಿಧ ಇಂದ್ರಿಯಗಳಿಂದ ಬರುವ ಸಂಕೇತಗಳನ್ನು ತೆಗೆದುಕೊಂಡು ಕಾರ್ಯ ನಿರ್ವಹಿಸುತ್ತವೆ ಎಂಬುದು. ಆದರೆ ಇವು ಮಾನಸಿಕ, ಬೌದ್ಧಿಕ ಕ್ರಿಯೆಯಲ್ಲಿ ನಿಖರವಾಗಿ ಯಾವ ರೀತಿಯ ಹಾಗೂ ಎಷ್ಟರ ಮಟ್ಟಿಗೆ ಸಂಬಂಧ ಹೊಂದಿವೆ ಎಂಬುದು ಇನ್ನು ಖಚಿತವಾಗಿ ತಿಳಿದುಬಂದಿಲ್ಲ.

ಆದರೆ ಕೆಲವು ಪ್ರಯೋಗಗಳ ಮುಖಾಂತರ ಕೆಲವು ಸಾಮಾನ್ಯ ಲಕ್ಷಣಗಳನ್ನು ವಿಜ್ಞಾನಿಗಳು ಗುರುತಿಸಿದ್ದಾರೆ. ಅವುಗಳ ಪ್ರಕಾರ 'ಎಡ ನಿಮ್ಮಿದಿಳು ಪ್ರಧಾನವಾಗಿದ್ದು ವಿಶ್ಲೇಷಣಾತ್ಮಕ ಕೆಲಸಗಳು, ಪರೀಕ್ಷೆಗಳು, ಲೆಕ್ಕಾಚಾರ ವಿಂಗಡಣೆ, ತರ್ಕಬದ್ಧ ಹಾಗೂ ವ್ಯವಸ್ಥಿತ ರಚನೆ ಮತ್ತು ಭಾಷಾ ಸಂಬಂಧಿತ ಚಟುವಟಿಕೆಗಳಲ್ಲಿ ತನ್ನ ಪ್ರಾಧಾನ್ಯ ತೋರುತ್ತದೆ. ಬಲನಿಮ್ಮಿದಿಳು ಸೃಜನಶೀಲ ಹಾಗೂ ಭಾವನಾ ಶಕ್ತಿಯ ತಾಣ''[೧೧] ಎಂದು ವಿಭಜಿಸಲಾಗಿದೆ. ಇದು ಎಷ್ಟರ ಮಟ್ಟಿಗೆ ಸತ್ಯವೋ, ಅಲ್ಲವೋ ಎಂಬುದನ್ನು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಕೆಲವು ವಿಜ್ಞಾನಿಗಳ ಪ್ರಕಾರ ಬಲನಿಮ್ಮಿದಿಳು ಕೂಡ ಕೆಲವು ಬೌದ್ಧಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತದೆ.

ಮೆದುಳಿನ ಈ ಆಲೋಚನಾ ವಿನ್ಯಾಸಕ್ಕೂ 'ಗಂಡುತನ' ಮತ್ತು 'ಹೆಣ್ಣುತನ'ದ ವಿಂಗಡಣೆಗಳಿಗೂ ಏನಾದರೂ ಸಂಬಂಧಗಳಿವೆಯೇ ಎಂಬುದನ್ನು ಪರಿಶೀಲಿಸುವುದಾದರೆ,

ರಾಬಿನ್‌ಲೆಕಾಫ್ ಎಂಬ ಆಧುನಿಕ ಭಾಷಾಶಾಸ್ತ್ರಜ್ಞ ಭಾಷೆಯಲ್ಲಿರುವ ಹೆಣ್ಣು ಮತ್ತು ಗಂಡುತನದ ನೆಲೆಗಳನ್ನು ಇನ್ನಷ್ಟು ವಿಸ್ತರಿಸಿ ನಮ್ಮೆದುರು ಮಂಡಿಸಿದ. ಈ ನೆಲೆಯಲ್ಲಿ ರೋಮನ್ ಜಾಕೋಬ್ಸನ್ ಎಂಬ ಭಾಷಾ ವಿಜ್ಞಾನಿಯ ವಿಚಾರಗಳು ಬಹಳ ಮುಖ್ಯವಾಗುತ್ತವೆ. ಇವನ ವಿಚಾರಗಳ ಮಂಡನೆಯ ಕಾಲಕ್ಕಾಗಲೇ ಪಾಲ್‌ಬ್ರೋಕಾ ಮತ್ತು ಕಾರ್ಲ್ ವರ್ನಿಕೆಯರ ವಿಚಾರಗಳು ಪ್ರಚಲಿತದಲ್ಲಿದ್ದವು.

ಮೆದುಳಿನ ಎಡಭಾಗದಲ್ಲಿ ಭಾಷಾ ನಿಯಂತ್ರಣ ಕೇಂದ್ರವಿದೆ. ಅದರೊಳಗೆ ಬಲನಿಮ್ಮ ದಿಗಳು, ಎಡನಿಮ್ಮಿ ದಿಳು ಎಂಬ ಎರಡು ಅಂತರ್‌ನಿಯಂತ್ರಣ ಕೇಂದ್ರಗಳಿವೆ. ಆ ಎರಡು ಕೇಂದ್ರಗಳಿಗೆ ಆಘಾತ ಉಂಟಾದಾಗದ ವಾಕ್‌ಸ್ತಂಬನ ಉಂಟಾಗುತ್ತದೆ. ಈ ವಾಕ್ ಸ್ತಂಭನದಲ್ಲಿ ಎರಡು ಬಗೆಗಳಿವೆ. ಒಂದು ಬ್ರೋಕಾನ ಏರಿಯಾಗೆ ಆಘಾತವಾದಾಗ ಉಂಟಾಗುವ ವಾಕ್‌ಸ್ತಂಭನ ಇನ್ನೊಂದು ವರ್ನಿಕ್ ಏರಿಯಾಗೆ ಆಘಾತವಾದಾಗ ಉಂಟಾಗುವ ವಾಕ್‌ಸ್ತಂಭನ.

ಈ ಸಂದರ್ಭದಲ್ಲಿ ರೋಮನ್ ಜಾಕೋಬ್ಸನ್ ನಮ್ಮ ಭಾಷಾ ಬಳಕೆಯ ಎರಡು ವಿಧಾನಗಳನ್ನು ಕುರಿತು ವಿವರಿಸುತ್ತಾನೆ. ಅವುಗಳೆಂದರೆ,

೧. Metaphoric - ಸಾದೃಶ್ಯ ಮೂಲ ಚಿಂತನಾಕ್ರಮ

೨. Metonymic - ಸಂಬಂಧ ಮೂಲ ಚಿಂತನಾಕ್ರಮ [೧೨]

ಅಂದರೆ ಯಾವುದಾದರೂ ಎರಡು ಸಂಗತಿಗಳ ನಡುವೆ ಇರುವ ಸಾದೃಶ್ಯಗಳ ಮೂಲಕ ಚಿಂತನೆಗಳನ್ನು ಮಾಡುವಂತಹುದು ಮೆಟಾಫಾರಿಕ್ ಚಿಂತನೆ. ಎರಡು ಸಂಗತಿಗಳ ನಡುವೆ ಸಾದೃಶ್ಯವಿಲ್ಲದೆಯೂ ಯಾವುದೋ ಒಂದು ಬಗೆಯ ಸಂಬಂಧವನ್ನು ಕಲ್ಪಿಸಿ ಕೊಂಡು ಚಿಂತಿಸುವುದು ಮೆಟಾನಾಮಿಕ್ ಚಿಂತನೆ.

ಮಾನವರ ಈ ಎರಡು ಬಗೆಯ ಗ್ರಹಿಕೆ ಮತ್ತು ಅಭಿವ್ಯಕ್ತಿಯ ಸಾಧ್ಯತೆಯನ್ನು ಕುರಿತು ರೋಮನ್ ಜಾಕೋಬ್ಸನ್ ಚರ್ಚಿಸಿದನು. ಅಂದರೆ ಇವನ ಪ್ರಕಾರ ಈ ಎರಡು ಬಗೆಯ ಚಿಂತನಾಕ್ರಮ ಗಂಡಿನಲ್ಲೂ ಇರುತ್ತವೆ. ಹೆಣ್ಣಿನಲ್ಲಿಯೂ ಇರುತ್ತವೆ. ಇದು ಗಂಡಿನ ಚಿಂತನಾಕ್ರಮ, ಅದು ಹೆಣ್ಣಿನ ಚಿಂತನಾಕ್ರಮ ಎಂದು ಅವನು ವಿಭಾಗಿಸಿ ಹೇಳಲಿಲ್ಲ.

ಆದರೆ ಇವನ ವಿಚಾರಗಳನ್ನು ತಪ್ಪಾಗಿ ಗ್ರಹಿಸಿದ ನಂತರದ ಭಾಷಾ ಶಾಸ್ತ್ರಜ್ಞರು ಹಾಗೂ ಸ್ತ್ರೀವಾದಿಗಳು ಮೆಟಾಫಾರಿಕ್ ಚಿಂತನಾಕ್ರಮವನ್ನು ಆಂಡ್ರೋ-ಸೆಂಟ್ರಿಕ್ ಎಂತಲೂ ಮೆಟಾನಾಮಿಕ್ ಚಿಂತನಾಕ್ರಮವನ್ನು ಗೈನೋ - ಸೆಂಟ್ರಿಕ್ ಎಂದೂ ಹೇಳಿ ಈ ಬಗೆಯ ವಿಭಜನಾ ಕ್ರಮಕ್ಕೆ ಬೇರೆ ಬೇರೆ ಪರಿಭಾಷೆಗಳನ್ನು ಕೂಡ ರೂಪಿಸುತ್ತಾ ಬಂದರು.

ಗಂಡು ಚಿಂತನಾ ಕ್ರಮ, ಗ್ರಹಿಕೆ ಮತ್ತು ಅಭಿವ್ಯಕ್ತಿ ಯಾವಾಗಲೂ ಕೂಡ ಸವಾಲು ಹಾಕುವ ರೀತಿಯದು, ಏನನ್ನಾದರೂ ಸ್ಥಾಪಿಸುವ, ಸಾಧಿಸುವ ಮಾದರಿಯದು, ಆ ಚಿಂತನಾ ಕ್ರಮವೇ ಒಂದು ಅಭಿಪ್ರಾಯವನ್ನು ಸ್ಥಾಪಿಸುವ ದೃಷ್ಟಿಯಿಂದ ಬೇರೊಂದು ಅಭಿಪ್ರಾಯವನ್ನು ನಿರಾಕರಿಸುವ ದೃಷ್ಟಿಯನ್ನು ಹೊಂದಿರುತ್ತದೆ. ಹೆಣ್ಣು ಚಿಂತನಾಕ್ರಮ ಎನ್ನುವುದು ಹಾಗಲ್ಲ ಅದು ಒಳಗೊಳ್ಳುವ ವಿಧಾನವನ್ನು ಅನುಸರಿಸುತ್ತದೆ ಎಂದೂ ಗಂಡಿನ ಆಲೋಚನಾ ಕ್ರಮ ಮತ್ತು ಹೆಣ್ಣಿನ ಆಲೋಚನಾ ಕ್ರಮಗಳನ್ನು ಪ್ರತ್ಯೇಕವಲಯಗಳನ್ನಾಗಿ ವಿಭಾಗಿಸಿಬಿಟ್ಟರು.

ಗಂಡು ಯಾವಾಗಲೂ ಸಾದೃಶ್ಯ ಮೂಲವಾಗಿಯೇ ಯೋಚನೆ ಮಾಡುತ್ತಾನೆ ಎಂಬುದಾಗಲಿ ಅಥವಾ ಹೆಣ್ಣು ಯಾವಾಗಲೂ ಸಂಬಂಧ ಮೂಲವಾಗಿಯೇ ಯೋಚನೆ ಮಾಡುತ್ತಾಳೆ ಎಂಬುದಾಗಲಿ ಪೂರ್ಣ ಸತ್ಯವಲ್ಲ. ಎರಡೂ ರೀತಿಯ ಚಿಂತನಾಕ್ರಮ ಇಬ್ಬರಲ್ಲೂ ಕೂಡ ಉಂಟು. ಅಲ್ಲದೆ ನರವಿಜ್ಞಾನಿಗಳ ಈ ಕುರಿತ ಚರ್ಚೆ ಗಂಡು / ಹೆಣ್ಣಿನ ಮೆದುಳು ಎಂದಾಗಿ ವಿಂಗಡಿಸಿ ಚರ್ಚಿಸಿದ್ದಲ್ಲ. ಒಟ್ಟಾರೆ ಮನುಷ್ಯ ಜೀವಿಯ ಮೆದುಳಿನ ಎರಡು ಭಿನ್ನ ಸಾಧ್ಯತೆಗಳನ್ನು ಕುರಿತು ಚರ್ಚಿಸಿದ್ದು ಎಂಬುದನ್ನು ಮರೆಯುವಂತಿಲ್ಲ.

ಯಾವುದೇ ಜ್ಞಾನವಲಯಗಳಿಗೆ ಸ್ತ್ರೀ/ಪುರುಷ ಎಂಬ ಬೇಧ ಭಾವವಿಲ್ಲ. ಇಬ್ಬರಿಗೂ ಸಮಾನ ಅವಕಾಶಗಳು ದೊರೆತರೆ ಇಬ್ಬರ ಜ್ಞಾನದ ವಲಯ, ತಾತ್ವಿಕ ದೃಷ್ಟಿಕೋನ ವಿಕಾಸವಾಗುತ್ತವೆ. ಜಾತಿ, ಮತ, ವೃತ್ತಿ, ಲಿಂಗ, ವರ್ಗ ಮುಂತಾದ ಎಲ್ಲಾ ಸಾಮಾಜಿಕ ಬೇದಗಳನ್ನು ವ್ಯಕ್ತಿಗಳ ಬಹಿರಂಗದ ಭಿನ್ನತ್ವದ ಸಂಕೇತಗಳೆಂದು ನಿರಾಕರಿಸುವ ಶಿವಶರಣರ ಸರ್ವ ಸಮಾನತೆಯ ತತ್ವ ಎಲ್ಲಾ ಕಾಲಕ್ಕೂ ಅವಶ್ಯಕ. ಜ್ಞಾನಕ್ಕೆ ಯಾವ ಲಿಂಗವಾದರೇನು. ಎಲ್ಲಾ ಬಾಗಿಲುಗಳು ಎಲ್ಲರಿಗೂ ತೆರೆದಿರಬೇಕು ಅಷ್ಟೇ.

### ಅಡಿಟಿಪ್ಪಣಿ

೧. ಡಾ. ಬಿ.ಎನ್. ಸುಮಿತ್ರಾಬಾಯಿ, ಸ್ತ್ರೀವಾದ, ೨೦೦೬, ಪು. ೧೭. ಇಲ್ಲಿ ಉಲ್ಲೇಖಿತ

೨. ಅದೇ, ಪು. ೨೧, ಇಲ್ಲಿ ಉಲ್ಲೇಖಿತ

೩. ಅದೇ, ಪು. ೨೧, ಇಲ್ಲಿ ಉಲ್ಲೇಖಿತ

೪. ಸಿಮೊನ್ ದ ಬೋವಾ, ದ ಸೆಕೆಂಡ್ ಸೆಕ್ಸ್, ೨೦೦೭, ಪು. ೬೩೮. ಇಲ್ಲಿ ಉಲ್ಲೇಖಿತ

೫. ಅದೇ, ಪು. ೬೩೮

೬. ಡಾ. ಬಿ.ಎನ್. ಸುಮಿತ್ರಾಬಾಯಿ, ಸ್ತ್ರೀವಾದ, ೨೦೦೬, ಪು. ೪೬. ಇಲ್ಲಿ ಉಲ್ಲೇಖಿತ

೭. ಅದೇ, ಪು. ೬೬

೮. ಸಿಮೊನ್ ದ ಬೋವಾ, ದ ಸೆಕೆಂಡ್ ಸೆಕ್ಸ್, ೨೦೦೭, ಪು. ೩೫

೯. ಅದೇ, ಪು. ೩೫

೧೦. ಶ್ಯಾಮಲಾ ಕೆ.ಸಿ. ಭಾಷೆ ಮತ್ತು ಮೆದುಳು. ಭಾಷಾವಿಶ್ವಕೋಶ (ಸಂ) ಕೆ.ವಿ. ನಾರಾಯಣ್, ೨೦೦೭. ಪು.೨೪೮, ಇಲ್ಲಿ ಉಲ್ಲೇಖಿತ

೧೧. ಅದೇ. ಪು. ೩೪೯, ಇಲ್ಲಿ ಉಲ್ಲೇಖಿತ

೧೨. Roman Jakobosn, The metaphoric and metonymic poles, Modern criticism and theory, edited by David Lodge, P-56.

# ಅಧ್ಯಾಯ -೪

## ಸಾಹಿತ್ಯ ಕೃತಿಗಳಲ್ಲಿನ ಹೆಣ್ಣಿನ ಭಾಷಿಕ ನೆಲೆ

ಸಾಹಿತ್ಯವೆಂದರೆ ಭಾಷಿಯ ಒಂದು ವಿಶಿಷ್ಟರೂಪ. ಸಾಹಿತ್ಯವು ಮನುಷ್ಯನ ಪ್ರಜ್ಞೆ ಮತ್ತು ಸುಪ್ತಪ್ರಜ್ಞೆಯ ಫಲಿತರೂಪ. ಸಾಹಿತ್ಯವು ಸಂಸ್ಕೃತಿಯ ಒಂದು ಉತ್ಪಾದನೆಯಾಗಿದ್ದು ಅದು ತಾನು ಹುಟ್ಟಿಬಂದ ಸಂಸ್ಕೃತಿಯನ್ನು ಪ್ರತಿನಿಧಿಸುತ್ತಾ ಇರುತ್ತದೆ. ವಾಸ್ತವ ಬದುಕಿನ ತಾರತಮ್ಯಗಳು ಸಾಹಿತ್ಯ ಕೃತಿಗಳಲ್ಲೂ ಪ್ರತಿ ಮೂಡುತ್ತಿರುತ್ತವೆ. ಅಲ್ಲದೆ ಸಾಹಿತ್ಯವೂ ಸಂಸ್ಕೃತಿಯಲ್ಲಿನ ಸ್ಥಾಪಿತ ಮೌಲ್ಯಗಳನ್ನು ಸ್ಥಾಪಿಸುವುದರೊಂದಿಗೆ, ತನ್ನೊಳಗಿನ ಸತ್ವದಿಂದ ಸ್ಥಾಪಿತವಾದದನ್ನು ಬುಡಮೇಲು ಮೂಡಬಲ್ಲ ಸಾಮರ್ಥ್ಯವನ್ನು ಸಹ ಹೊಂದಿರುತ್ತದೆ.

ಪುರುಷ ಪ್ರಧಾನವಾದ ವ್ಯವಸ್ಥೆಯಲ್ಲಿ ಭಾಷೆ ಹಾಗೂ ಅವರ ಅಂಗವಾದ ಸಾಹಿತ್ಯದ ರಚನೆಗಳೆಲ್ಲಾ ಪುರುಷ ಕೇಂದ್ರಿತ ನೆಲೆಯಲ್ಲಿಯೇ ಬೆಳೆದಿರುತ್ತವೆ. ಸಾಹಿತ್ಯದ ಸ್ವರೂಪ, ಧ್ಯೇಯ, ಆದರ್ಶ, ಮತ್ತು ಅವುಗಳ ಮಾನದಂಡಗಳು ಪುರುಷರಿಂದ ತಮ್ಮನ್ನೇ ದೃಷ್ಟಿಯಲ್ಲಿಟ್ಟುಕೊಂಡು ರೂಪುಗೊಂಡಿರುವಂತಹ ಪರಿಸರದಲ್ಲಿ ಆ ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶ ಪಡೆಯುವುದೇ ಮಹಿಳೆಯರಿಗೆ ಒಂದು ಕಾಲದಲ್ಲಿ ದುಸ್ತರವಾಗಿತ್ತು.

ಪುರುಷ ಬರಹಗಳನ್ನು ಲಿಂಗ ವ್ಯವಸ್ಥೆಯಾಧಾರಿತ ಸಂಕಥನಗಳೆಂದೇ ಭಾವಿಸುವ ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ''"All subjects are gendered and any Literary discourse is gender specific" [೧] ಎಂಬ ವಾದವನ್ನು ಹೂಡುತ್ತಾರೆ.

ಭಾಷೆಯ ಮೇಲಿನ ಅಧಿಕಾರ ಪೂರ್ಣವಾಗಿ ಪುರುಷನದೇ ಆಗಿರುವಾಗ ಅದೇ ಭಾಷೆಯ ಮೂಲಕ ಮಹಿಳೆ ತನ್ನ ಅನುಭವದ ವಿಶೇಷತೆಯನ್ನು ಪ್ರಕಟಿಸುವುದಕ್ಕೆ ಸಾಧ್ಯವಾಗದು. ಲಿಂಗ ಭಿನ್ನತೆಯ ನೈಸರ್ಗಿಕ ಲಕ್ಷಣದ ಕಾರಣದಿಂದ ಮಹಿಳೆ ಈ ಜಗತ್ತನ್ನು ಗ್ರಹಿಸುವ ಕ್ರಮ, ಬದುಕಿನ ಅನುಭವಗಳನ್ನು ಪಡೆಯುವ ಕ್ರಮಗಳಲ್ಲಿ ಪುರುಷರದಕ್ಕಿಂತ ಭಿನ್ನವೇ ಆಗಿರುತ್ತದೆ. ಹಾಗೂ ತನ್ನದೇ ಅನುಭವವನ್ನು ಹಿಡಿದು ಹೇಳುವಲ್ಲಿ ಪುರುಷ ರೂಪಿತ ಭಾಷೆ ಮಹಿಳೆಗೆ ಒಗ್ಗಲಾರದು. ಆದ್ದರಿಂದ ತನ್ನ ಹೆಣ್ಣು ದೇಹದ ಸೂಕ್ಷ್ಮ

ಸಂವೇದನೆಗೆ ತನ್ನದೇ ದೇಹದ ಲಯಗಳನ್ನು ಹಿಡಿದು ನುಡಿಯಬಲ್ಲಂಥ ತನ್ನದೇ ಭಾಷೆಯನ್ನು ಆಕೆ ರೂಪಿಸಿಕೊಳ್ಳುವ ಅಗತ್ಯವಿದೆ''[೨] ಎಂಬ ಒಂದು ವಿಚಾರಧಾರೆ ಪ್ರಚಲಿತದಲ್ಲಿತ್ತು.

ಅಂದರೆ ಯಾವ ಸ್ತ್ರೀ ಲಿಂಗತ್ವದ ಕಾರಣದಿಂದ ತಾನು ನಿಕೃಷ್ಠ ಜಾಗಕ್ಕೆ ಒತ್ತಲ್ಪಟ್ಟಿದ್ದಳೋ ಅದರ ಮುಖಾಂತರವೇ ಅಭಿವ್ಯಕ್ತಿಕೊಡಬಲ್ಲ ಭಾಷೆಯೊಂದನ್ನು ಕಟ್ಟುವುದರ ಮೂಲಕ ತನ್ನ ನೈಜ ವಿವೇಚನೆಯನ್ನು ಮಹಿಳೆ ಸಾಧಿಸಬಹುದು. ಎಂಬ ನಂಬಿಕೆಯ ಹಿನ್ನೆಲೆಯ ಮಾತು ಇದು. ಸ್ತ್ರೀ ಸಂಸ್ಕೃತಿಯ ಸಂವೇದನೆಗದಳನ್ನು ಅಭಿವ್ಯಕ್ತಿಸಬಲ್ಲ ಮಹಿಳೆಯರದೇ ಆದ ಸೂಕ್ತ ಭಾಷೆಗಾಗಿ ಮಹಿಳಾ ಬರಹಗಾರ್ತಿಯರು ಹುಡುಕಾಟ ನಡೆಸಿದರು.

ಜಾನ್‌ಸ್ಟೂಅರ್ಟ್ ಮಿಲ್ ಎಂಬ ಪಾಶ್ಚಾತ್ಯ ಚಿಂತಕಿ ''Women would have a hard struggle to overcome the influence of male literary tradition and to create an original primary and independent art"[೩] ಎಂದು ಮಹಿಳಾ ಬರಹಗಾರ್ತಿಯರಿಗೆ ಸೂಚನೆ ನೀಡಿದಳು.

ಈ ಹಿನ್ನೆಲೆಯಲ್ಲಿ ಮಹಿಳಾ ಬರಹಗಾರಿಕೆಯದೇ ಸ್ವತಂತ್ರ ಕಲಾ ಪರಂಪರೆಯನ್ನು ಕಟ್ಟುವ ಹೊತ್ತಿನಲ್ಲಿ ಅವರ ಬರಹಕ್ಕೆ ತಮ್ಮದೇ ಆದ ಲಕ್ಷಣವಿದೆಯೇ? ಅಂಥ ಲಕ್ಷಣದ ಸ್ವರೂಪ ಯಾವುದು? ಅದರ ಹಿಂದಿನ ಮೂಲಕಾರಣವು ಸ್ತ್ರೀಯೆಂಬ ಜೀವಶಾಸ್ತ್ರ ಮೂಲದ ನೈಸರ್ಗಿಕ ಭಿನ್ನ ಲಕ್ಷಣಗಳಿಂದಲೇ ಹುಟ್ಟಿದ್ದೋ? ಅಥವಾ ರಾಜಕೀಯಾರ್ಥಿಕ ಸಾಮಾಜಿಕ ವ್ಯವಸ್ಥೆಯಲ್ಲಿ ಪಿತೃಪ್ರಧಾನದ ಅಡಿಯಲ್ಲಿ ದಮನಿತಳಾಗಿ, ಅಧೀನಳಾಗಿ ಬದುಕುವುದರಿಂದ ಅವರ ಬರಹಗಳು ಭಿನ್ನವಾದವೋ''?[೪] ಎಂಬ ಸುಮಿತ್ರಾ ಬಾಯಿಯವರ ಪ್ರಶ್ನೆಗಳ ಹಿನ್ನೆಲೆಯಲ್ಲಿ ಮಹಿಳೆಯರ ಭಾಷಿಕ ನೆಲೆಯನ್ನು ಗುರುತಿಸುವುದಾದರೆ,

ಹೆಣ್ತನದ ಮೂಲ ದೈಹಿಕ ಲಕ್ಷಣಗಳ ಸಾರ್ವತ್ರೀಕೃತ ನಿರ್ವಚನದ ಮೇಲೆ ಬೆಳೆಸಿರುವ ಭಾಷಿಕ ಅಭಿವ್ಯಕ್ತಿಯಲ್ಲಿ ಹೆಣ್ಣಿನ ಅನನ್ಯತೆಯನ್ನು ಕಾಣಲು ಸಾಧ್ಯವಾಗಿದೆಯೇ? ಎಂಬ ಪ್ರಶ್ನೆಗೆ ಹಿನ್ನೆಲೆಯಾಗಿ ಸಿಮೋನ್ ದ ಬೋವಾಳ ವಿಚಾರವನ್ನು

ಪರಿಗಣಿಸುವುದಾದರೆ, "ಒಂದಿಷ್ಟು ಸ್ತ್ರೀಯರು ಮುಟ್ಟು, ತಾಯ್ತನ, ಮುಂತಾದವುಗಳನ್ನೇ ವೈಭವೀಕರಿಸುತ್ತಾ ಅವುಗಳಲ್ಲಿ ಬೇರೆ ರೀತಿಯ ಬರಹದ ತಳಹದಿಯೊಂದನ್ನು ಕಾಣಬಹುದೆಂದು ನಂಬುತ್ತಾರೆ. ಈ ಬಗ್ಗೆ ನಾನು ಪೂರ್ತಿ ವಿರೋಧಿಸುತ್ತೇನೆ. ಏಕೆಂದರೆ ನನ್ನ ದೃಷ್ಟಿಯಲ್ಲಿ ಅದು ಪುರುಷರು ರಚಿಸಿದ ಬಲೆಯಲ್ಲೇ ಬೀಳುವಂಥದ್ದಾಗಿದೆ. ಅವುಗಳ ಬಗ್ಗೆ ಅತಿರೇಕದ ಆತ್ಮರತಿಯಲ್ಲಿ ಮುಳುಗಿ ದತ್ತ ಸಂಗತಿಗಳ ತಳಪಾಯದ ಮೇಲೆ ಒಂದು ವ್ಯವಸ್ಥೆಯನ್ನು ಕಟ್ಟಿದಲ್ಲಿ ಅದು ಸ್ತ್ರೀ ವಿಶಿಷ್ಟ ಬದುಕಿನ ಕ್ರಮವುಳ್ಳ ಸ್ತ್ರೀ ಸಂಸ್ಕೃತಿ ಆಗಬಲ್ಲದೆಂದು ಹೇಳುವ ಯಾವ ಆಧಾರವೂ ಇಲ್ಲ."[೫] ಎಂದು ಅಭಿಪ್ರಾಯ ಪಡುತ್ತಾಳೆ.

ಬೋವಾಳ ಅಭಿಪ್ರಾಯವನ್ನು ಒಪ್ಪುತ್ತಾ ಕೇವಲ ಹೆಣ್ಣಿನ ಲೈಂಗಿಕತೆ ಗರ್ಭಧಾರಣೆ ಹೆರಿಗೆ, ಮುಟ್ಟು, ಮುಂತಾದ ಕೆಲವು ದೈಹಿಕ ಲಕ್ಷಣಗಳನ್ನು ಭಾಷೆಯ ಮುಖಾಂತರ ವೈಭವೀಕರಿಸಲು ಮುಂದಾದರೆ ಈಗಿರುವ ಸಿದ್ಧಮಾದರಿಗಳನ್ನು ಕೆಳಗಿನ ನೆಲೆಯಿಂದ ಮೇಲಕ್ಕೆ ಎತ್ತಿ ಹಿಡಿದಂತಾಗುತ್ತದೆ ಅಷ್ಟೇ. ಆದರೆ ಅಷ್ಟು ಮಾತ್ರಕ್ಕೆ ಸ್ತ್ರೀಯರು ಜೀವ ಸಂರಕ್ಷಣೆಯ ಸಮಾನತೆಯ ಉದಾತ್ತವಾದ ನೀತಿಯೊಂದನ್ನು ಜಗತ್ತಿಗೆ ಬೋಧಿಸಬಲ್ಲರು ಎಂದು ಭಾವಿಸುವುದು ಅಸಂಗತವಾಗುತ್ತದೆ. ಇಲ್ಲಿ ಹೊಸತನವನ್ನು ಹೊಸ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗುವುದಕ್ಕಿಂತ ಅದೊಂದು ಅತಿರೇಕದ ಆತ್ಮರತಿಯಾಗುತ್ತದೆ.

ಬದಲಿಗೆ ಸ್ತ್ರೀ ಎಂಬ ಕಾರಣದಿಂದ ಜೈವಿಕ ಲಕ್ಷಣಗಳ ಮೂಲಕ ಬರವಣಿಗೆಗೆ ತೊಡಗುವುದಕ್ಕಿಂತ ರಾಜಕೀಯಾರ್ಥಿಕ ಸಾಮಾಜಿಕ ವ್ಯವಸ್ಥೆಯಲ್ಲಿ ಪಿತೃಪ್ರಧಾನದ ಅಡಿಯಲ್ಲಿ ಧಮನಿತಳಾಗಿ, ಅಧೀನಳಾಗಿ ಬದುಕುವ ಸ್ಥಿತಿಯನ್ನು ಮೀರುವಿಕೆಯ ನೆಲೆಯಲ್ಲಿ ಬರವಣಿಗೆಗೆ ತೊಡಗಿದರೆ ಅವಳ ಸ್ವಂತ ಅಭಿವ್ಯಕ್ತಿಗೆ ಸ್ವಂತ ಭಾಷೆಯನ್ನು ರೂಪಿಸಿಕೊಳ್ಳಲು ಸಾಧ್ಯವಾಗಬಹುದು. ಒಟ್ಟಾರೆ ಸಮಾಜ ರೂಪಿಸಿರುವ ಪುರುಷ ತಾತ್ವಿಕತೆಯನ್ನು ಭಾಷಿಕ ನೆಲೆಯಲ್ಲಿ ಮೀರಲು ಮುಂದಾಗಬೇಕು. ಇಲ್ಲವಾದಲ್ಲಿ ಪುರುಷ ರೂಪಿತ ಭಾಷೆಯನ್ನೇ ತನ್ನ ಅಭಿವ್ಯಕ್ತಿಗೂ ಬಳಸಬೇಕಾದ ಅನಿವಾರ್ಯತೆ ಬರುತ್ತದೆ.

ಭಾಷೆಯ ಮೇಲೆ ಪರಮಾಧಿಕಾರವುಳ್ಳ ಪುರುಷ ಬರಹಗಾರರು ತಮ್ಮದೇ ಆದ ಹೊಸ ಹೊಸ ಪ್ರಯೋಗಶೀಲ ಪ್ರಯತ್ನಗಳಿಂದ ಹೊಸತನ್ನು ಸೃಷ್ಟಿಸುತ್ತಲೇ

ಹೋಗುತ್ತಾರೆ. ಆದರೆ ಮಹಿಳೆಯರ ಸ್ಥಿತಿ ಇದಕ್ಕಿಂತ ಭಿನ್ನವಾದದ್ದು. ನೇರವಾಗಿ ಮಾತನಾಡಲು ಆಸ್ಪದವಿರದ ಧ್ವನಿಯನ್ನು ಎತ್ತದಂತೆ ಬಾಯಿಮುಚ್ಚಿಸುವ ವ್ಯವಸ್ಥೆಯೊಳಗೆ ತನ್ನೊಳಗಿನ ತುಡಿತಗಳಿಗೆ ನೇರವಾಗಿ ಅಭಿವ್ಯಕ್ತಿ ನೀಡಲು ರೂಪಿಸಿಕೊಂಡ ಭಾಷಿಕ ಮಾರ್ಗದಲ್ಲಿ ನಿಜವಾಗಿಯೂ ಪುರುಷ ತಾತ್ವಿಕತೆಯನ್ನು ಮೀರಲು ಸಾಧ್ಯವಾಗಿದೆಯೇ ?

ಪುರುಷರ ಬರಹಗಳಿಗೆ ಹೋಲಸಿದಾಗ ಮಹಿಳೆಯರ ರಚನೆಗಳಲ್ಲಿನ ಭಾಷೆ, ಶೈಲಿ, ಧ್ವನಿ, ತಂತ್ರಗಳಲ್ಲಿ, ಭಿನ್ನತೆ ಕಂಡುಬರುತ್ತದೆ. ಇದಕ್ಕೆ ಸಾಂಸ್ಕೃತಿಕ ವ್ಯವಸ್ಥೆಯಲ್ಲಿನ ಮೌಲ್ಯಗಳಿರಬಹುದು ಅಥವಾ ಜೈವಿಕ ಲಿಂಗತ್ವದ ಭಿನ್ನತೆಯ ಪ್ರಭಾವವೂ ಕಾರಣವಾಗಿರಬಹುದು. ಒಟ್ಟಾರೆ ಗಂಡು-ಹೆಣ್ಣಿನ ನಡುವಿನ ಸ್ವಭಾವ ಭಿನ್ನತೆ ಜನ್ಮತಃ ಬಂದಿರುವುದರಿಂದ ಅದನ್ನು ಶಾಶ್ವತ ವಾಸ್ತವವೆಂದು ನಂಬಬಹುದು.

ಈ ಹಿನ್ನೆಲೆಯಲ್ಲಿ ಮಹಿಳಾ ಬರಹದ ಕೆಲವು ಮುಖ್ಯವಾದ ಲಕ್ಷಣಗಳನ್ನು ಗುರುತಿಸಬಹುದು. ಶೋವಾಲ್ಟರ್ ಗುರುತಿಸುವಂತೆ ಸ್ತ್ರೀಯರ ಸೃಜನಶೀಲತೆಯ ಮಾನಸಿಕ ಗತಿಧರ್ಮ, ಹೆಣ್ಣಿನ ವೈಯಕ್ತಿಕ ಮತ್ತು ಸಾಮಾಜಿಕ ಜೀವನ ಕ್ರಮಗಳ ಕಕ್ಷಾ ಪಂಥ ಹಾಗೂ ಸ್ತ್ರೀಸಾಹಿತ್ಯ ಪರಂಪರೆಯ ನಿಯಮಗಳ ವಿಕಾಸದ ದಾಖಲೆಗಳ[೬] ಹಿನ್ನೆಲೆಯಲ್ಲಿ ಅವುಗಳನ್ನು ಈ ಕೆಳಕಂಡಂತೆ ಮೂರು ರೀತಿಯಲ್ಲಿ ವಿಭಾಗಿಸಿಕೊಳ್ಳಬಹುದು.

೧. ಪುರುಷ ಮೌಲ್ಯಗಳ ಸ್ಥಿರೀಕರಣದ ರಚನೆಗಳು

೨. ಸಿದ್ಧಮಾದರಿಗಳ ಭಗ್ನಗೊಳಿಸುವ ರಚನೆಗಳು[೭]

೩. ಸಮಾನತೆಯ ಕಲ್ಪನೆಯ ರಚನೆಗಳು

ಮೊದಲನೆಯ ಮಾದರಿಯ ರಚನೆಗಳು ಸಂಪೂರ್ಣವಾಗಿ ಪುರುಷ ಮೌಲ್ಯಗಳನ್ನು ಅಂಗೀಕರಿಸಿಕೊಂಡು, ತಮ್ಮ ಸ್ಥಿತಿಗೆ ಮರುಕ ಪಡುತ್ತಾ, ಬದಲಾವಣೆಗೆ ಪ್ರಯತ್ನಿಸದೇ ಯಥಾಸ್ಥಿತಿಯನ್ನೇ ಒಪ್ಪಿಕೊಂಡು ಅಭಿವ್ಯಕ್ತಿಸುವ ಮಾದರಿಯದು. ಇಲ್ಲಿ ಹೆಣ್ಣು ತನ್ನ ಲೋಕವನ್ನು ಗಂಡಸಿನ ದೃಷ್ಟಿಯಿಂದಲೇ ಗ್ರಹಿಸಿ ನಿರೂಪಿಸುತ್ತಾಳೆ. ಪುರುಷರು ರಚಿಸಿದ ಸ್ತ್ರೀ ಮೌಲ್ಯಗಳೇ ಇಲ್ಲಿಸಮರ್ಥನೆ ಗೊಂಡಿರುವುದನ್ನು ಗಮನಿಸಬಹುದು. ತಾಯ್ತನ, ತ್ಯಾಗ, ಕುಟುಂಬನಿಷ್ಠೆ ಜೀವ ತೇಯ್ದುಕೊಳ್ಳುವಿಕೆ ಪತಿಪಾರಾಯಣತೆ, ಪಾತಿವ್ರತ್ಯತೆ ಇವೆಲ್ಲವನ್ನು ಆದರ್ಶದ ನೆಲೆಯಲ್ಲಿ ಚಿತ್ರಿಸುವ ಕೃತಿಗಳು

ಮಹಿಳೆಯರಿಂದ ರಚಿತವಾಗಿವೆ. ಈ ಎಲ್ಲಾ ಮೌಲ್ಯಗಳು ಪುರುಷ ಜಗತ್ತಿನಿಂದ ಸ್ಥಿರೀಕರಣಗೊಂಡಿರುವಂಥವುಗಳು.

ಉದಾಹರಣೆಗೆ ಕೊಡಗಿನ ಗೌರಮ್ಮ ರವರ 'ವಾಣಿಯ ಸಮಸ್ಯೆ' ಎಂಬ ಕಥೆಯಲ್ಲಿನ 'ಇಂದು' ಪಾತ್ರ ಚಿತ್ರಣವನ್ನು ನೋಡುವುದಾದರೆ,

> ''ಅವಳು ಸ್ವಭಾವತಃ ಪಾಪಭೀರು. ಸಮಾಜದ ಕಟ್ಟು-ಕಟ್ಟಳೆಗಳನ್ನೇ ದೇವರ ನಿಯಮಗಳು ಎಂದು ತಿಳಿದು ಬೆಳೆದವಳು. ಅವಳಿಗೆ ತನ್ನೊಲವು ರತ್ನನ ಕಡೆ ತಿರುಗಿದೆ ಎಂಬುದರ ಅರಿವು ಆದಾಗಲೇ ಬಹಳ ಭಯವಾಯಿತು. ವಾಣಿ ಹೊರಟು ಹೋದ ಮೇಲಂತೂ ಅವಳ ಭಯವು ಒಂದಕ್ಕೆ ಹತ್ತಾಗಿ ಬೆಳೆಯತೊಡಗಿತು. ತನ್ನ ಶಾಂತ ಜೀವನ ಪ್ರವಾಹವನ್ನು ಕಲಕಿ ಕದಡಿಸುವ ಯೋಚನೆಗಳಿಗೆ ಹೃದಯದಲ್ಲೆಡೆ ಕೊಟ್ಟೆ ಹೇಗೆ? ಏಕೆ? ಎಂಬ ಪ್ರಶ್ನೆಗಳು ಸದಾ ಅವಳನ್ನು ಬಾಧಿಸತೊಡಗಿದವು. ವಾಣಿಯ ಪತಿಯನ್ನು ತಾನು ಪ್ರೀತಿಸುವುದು ಅನುಚಿತ ಎಂಬುದು ಅವಳಿಗೆ ತಿಳಿದಿದ್ದರೂ ಆ ವಿಷಯದಲ್ಲವಳು ಏನೂ ಮಾಡಲಾರದವಳಾಗಿದ್ದಳು. ಅವನನ್ನು ಪ್ರೀತಿಸದಿರುವುದು ಅವಳ ಶಕ್ತಿಗೆ ಮೀರಿದ ಮಾತಾಗಿತ್ತು. ತನ್ನ ಈ ಅನುಚಿತ ಪ್ರೇಮವು ರತ್ನನಿಗೆಲ್ಲಿ ತಿಳಿದು ಬಿಡುವುದೋ ಎಂಬ ಭಯದಿಂದಲೇ ಅವಳು ವಾಣಿ ಹೊರಟು ಹೋದ ತರುವಾಯ ಆ ಕಡೆ ಸಹ ಹೋಗಲಿಲ್ಲ.[೮]

ಹೀಗೆ ವಿಧವೆಯಾದ ಇಂದುವಿಗೆ ಈ ಸಮಾಜ ನಿರ್ಮಿಸಿದ ಕಟ್ಟುಕಟ್ಟಳೆಗಳನ್ನು ಮೀರಿ ತನ್ನ ವಯಕ್ತಿಕ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲು ಎಂದಿಗೂ ಸಾಧ್ಯವಾಗಲೇ ಇಲ್ಲ. ನೈತಿಕ ಎಚ್ಚರಿಕೆ ಅವಳಲ್ಲಿ ಸದಾ ಜಾಗೃತಗೊಂಡೇ ಇತ್ತು.

ಎರಡನೆಯ ಮಾದರಿಯ ರಚನೆಗಳಲ್ಲಿ ಸ್ತ್ರೀಯರು ಸಂಪೂರ್ಣವಾಗಿ ಪುರುಷ ತಾತ್ವಿಕತೆಯ ವಿರುದ್ಧ ಬಂಡೆದ್ದವರು. ಇವರು ಪುರುಷ ರಚಿತ ಸಾಹಿತ್ಯದಲ್ಲಿರುವ ಸ್ತ್ರೀ ಪ್ರತೀಕಗಳು, ರೂಪಕಗಳು, ಸ್ತ್ರೀ ಕುರಿತಾದ ಮಿಥ್ಯಾಕಲ್ಪನೆಗಳು ಎಲ್ಲವನ್ನೂ ಪ್ರತಿರೋಧಿಸುವ ನೆಲೆಯಲ್ಲೇ ಬರೆಯತೊಡಗಿದ್ದಾರೆ. ಸಾಂಪ್ರದಾಯಿಕ ಸಿದ್ಧಮಾದರಿಗಳಿಗೆ

ಬದಲಾಗಿ ಗಂಡುಬೀರಿ ಪಾತ್ರ ಚಿತ್ರಣಗಳಂತಹ ಸ್ವತಂತ್ರ ಮನೋವೃತ್ತಿಯುಳ್ಳ ಸ್ತ್ರೀ ಪ್ರತೀಕಗಳನ್ನು ಸೃಷ್ಟಿಸಿದ್ದಾರೆ. ಉದಾಹರಣೆಗೆ ವೀಣಾ ಶಾಂತೇಶ್ವರ ಅವರ 'ಶೋಷಣೆ ಬಂಡಾಯ ಇತ್ಯಾದಿ' ಕಾದಂಬರಿಯ ಶಶಿಯ ಪಾತ್ರವನ್ನು ಗಮನಿಸುವುದಾದರೆ,

> ''ಗಂಡಸರೆಲ್ಲಾ ಸ್ವಾರ್ಥಿಗಳು ಕಮಲಾ, ನಿನ್ನ ಕನಸಿನ್ಯಾಗಿರೋ ಆದರ್ಶ, ನಿಸ್ವಾರ್ಥ ಪ್ರೇಮ ಯಾವ ಗಂಡಸಿನ ಮನಸ್ಸಿನೊಳಗೂ ಹೃದಯುದೊಳಗೂ ಇರೋದಿಲ್ಲ. ಕಾವ್ಯಾದಾಗ ವಾತ್ರ ಅಂಥಾದ್ದು ಸಿಗೋದು. ಹಾಂಗ ನೋಡಿದರ ಗಂಡಸರಿಗೆ ಮನಸ್ಸು- ಹೃದಯ ಅನ್ನೋದೇ ಇರೋದಿಲ್ಲ. ಅವರಿಗಿರೋದು ಅದ್ಭುತ ತಲೆ ಮಾತ್ರ. ಆ ಅದ್ಭುತ ತಲೆ ಉಪಯೋಗಿಸಿ ನಿನ್ನಂಥ ಬಕರಾ ಹೆಂಗಸರನ್ನು ಸಿಸ್ಟಮ್ಯಾಟಿಕ್ ಆಗಿ ಫೂಲ್ ಮಾಡತಾರ.''[೬]

ಹೀಗೆ ಪ್ರತಿಯೊಂದು ವಿಷಯದಲ್ಲೂ ಗಂಡಸರನ್ನು ಸದಾ ವೈಚಾರಿಕ ಎಚ್ಚರದಿಂದಲೇ ನೋಡುವ ಕ್ರಮವನ್ನು ಇಲ್ಲಿ ಕಾಣಬಹುದು.

ಮೂರನೆಯ ಮಾದರಿಯ ರಚನೆಗಳು ಗಂಡು ಮೇಲು, ಹೆಣ್ಣು ಕೀಳು ಅಥವಾ............ ಹೆಣ್ಣು ಮೇಲು ಗಂಡು ಕೀಳು ಎಂಬ ವಿಭಜನೆಯನ್ನು ಬದಿಗಿಟ್ಟು ಇಬ್ಬರೂ ಸಮಾನರು ಎಂಬ ಸಮಾನತೆಯ ತತ್ವ ಸಾರುವ ರಚನೆಗಳು ಎಂದು ಹೇಳಬಹುದು. ಉದಾಹರಣೆಗೆ ಶಶಿಕಲಾ ವೀರಯ್ಯಸ್ವಾಮಿಯವರ 'ಗುಬ್ಬಿಮನಿ' ಕವನವನ್ನು ಗಮನಿಸುವುದಾದರೆ,

''ಅಲ್ಲಮತ್ತ,
ಈ ಮೈಕೊರೀ ಥಂಡ್ಯಾಗ
ನನಗೇನನಸತೈತಿ
ಗೊತ್ತೇನ ನಿನಗ ?
ತಿರಗಿ ನಾವಿಬ್ರೂ ಸಣ್ಣವ್ರಾಗಿ
ನಾ ಗುಬ್ಬೀಮನಿ ಕಟ್ಬೇಕು
ನೀ ಬೇಲಿ ಕಟ್ಬೇಕು
ನಾವಿಬ್ರೂ ಆ ಬೇಲಿ ಒಳಗಿನ
ಗುಬ್ಬಿ ಮನ್ಯಾಗ ಕುಂತು

ಬೆಚ್ಚಗೆ ಬೆಂಕಿ ಕಾಸಬೇಕೂ
ಅಂತ
ಒಮ್ಮೇನೂ ನಿನಗೇನೂ
ಹಿಂಗ ಅನಸೂದಿಲ್ಲೇನ
ಮಾವಾ ?[೧೦]

ಗುಬ್ಬಿಮನಿ ಕಟ್ಟಿ ಅದಕ್ಕೆ ಬೇಲಿ ಹಾಕಿ, ಬೇಲಿ ದಾಟಿ ಹೊರಗೆ ಬಂದ್ರೆ ಕಾಲ ಮುರಿದು ಕೈಗೆ ಕೊಡ್ತೀನಿ ಎಂದು ಗಂಡು-ಹೆಣ್ಣಿಗೆ ಆಜ್ಞೆ ಮಾಡಿದರೆ, ಹೆಣ್ಣು ಆ ಬಂಧನದ ಮನೆಯನ್ನೇ ಪ್ರೀತಿಯ ಗುಬ್ಬಿಮನಿಯಾಗಿ ಪರಿವರ್ತಿಸಿಕೊಂಡು ಈ ಬೇಲಿಯ ಒಳಗೆ ಇಬ್ಬರೂ ಸಮಾನವಾಗಿರೋಣ ಎಂಬ ಸಮಾನತೆಯ ಹಂಬಲವನ್ನು ವ್ಯಕ್ತಪಡಿಸುತ್ತಾಳೆ.

**ಸ್ವಂತ ಅಭಿವ್ಯಕ್ತಿಗೆ ಸ್ವಂತ ಭಾಷೆ ರೂಪಿಸಿಕೊಂಡಿದ್ದಾಳೆಯೇ?**

ಮಹಿಳೆ ತನ್ನ ವಿವಿಧ ಅಭಿವ್ಯಕ್ತಿ ಮಾರ್ಗಗಳಲ್ಲಿ ತನ್ನದೇ ಆದ ಸ್ವಂತ ಭಾಷೆಯನ್ನು ಸೃಷ್ಟಿಸಿಕೊಂಡಿದ್ದಾಳೆಯೇ ? ಪುರುಷ ನಿರ್ಮಿತ ಭಾಷೆಯನ್ನು ಸೃಜನಶೀಲ ನೆಲೆಯಲ್ಲಿ ಮೀರಲು ಸಾಧ್ಯವಾಗಿದೆಯೇ ? ಎಂಬುದು ಈಗ ನಮ್ಮ ಮುಂದಿರುವ ಪ್ರಶ್ನೆ.

ಮಹಿಳಾ ಬರವಣಿಗೆ ಹಾಗೆಂದರೇನು ? ಅದರ ಲಕ್ಷಣವೇನು ? ಎಂಬ ಪ್ರಶ್ನೆಯನ್ನು ಮಹಿಳಾವಾದಿಗಳಿಗೆ ಕೇಳಿದರೆ ಅವರುಗಳು ಹೇಳುವ ಒಂದೇ ಉತ್ತರವೆಂದರೆ ಗಂಡಿನ ತರ್ಕ ಇದೆಯಲ್ಲಾ, ವೈಚಾರಿಕತೆ ಇದೆಯಲ್ಲ, ಗಂಡಸರು ಕಲೆಯ ಭಾಷೆಯನ್ನು ಹೀಗೆಯೇ ಕಟ್ಟಬೇಕು ಅಂತ ಹೇಳುತ್ತಾರಲ್ಲ ಅದೆಲ್ಲವನ್ನೂ ಮುರಿಯತಕ್ಕಂತಹ ಭಾಷೆಯೇ ಫೆಮಿನೈನ್ ರೈಟಿಂಗ್ ಎನ್ನುತ್ತಾರೆ.

ಆಗ ಮಹಿಳೆಯರಿಗೆ ಬರಹವೆಂಬುದು ಅಸ್ಥಿತ್ವ ಕಾಯ್ದುಕೊಳ್ಳುವ ಹೋರಾಟದ ಒಂದು ವಿಧಾನವಾಗಿ ತನ್ನದೇ ಮಾತಿಗಾಗಿ, ತನ್ನದಾದ ವ್ಯಕ್ತಿತ್ವಕ್ಕಾಗಿ ತನ್ನ ಅಂಕಿತಕ್ಕಾಗಿ ಹುಡುಕುವ ಯತ್ನದಲ್ಲಿ ಪರಂಪರೆ ಒದಗಿಸುವ ಸ್ತ್ರೀ ಮೌಲ್ಯಗಳು, ಅದನ್ನು ಪ್ರತಿನಿಧಿಸುವ ಪುರಾಣ ಸ್ತ್ರೀ ಪ್ರತೀಕಗಳು, ಅವೇ ಮೌಲ್ಯಗಳ ವಾಹಕವೇ ಆದ ತಾಯಿ, ಪತಿವ್ರತೆ, ಕುಟುಂಬಿನಿ, ಸಹಧರ್ಮಿಣಿ ಮಾದರಿಗಳು ಮೊದಲಹಂತದಲ್ಲಿ ಸ್ವಾಯತ್ತ ವ್ಯಕ್ತಿತ್ವ ಸಾಧನೆಗೆ ತೊಡಕುಗಳಂತೆ ತೋರಿ ಅವುಗಳನ್ನು ಪ್ರತಿಭಟಿಸುವುದೇ ಸ್ವಂತ ಅಂಕಿತ ಕಂಡುಕೊಳ್ಳುವ ಹಾದಿ ಎಂದು ಅನೇಕ ಮಹಿಳಾ ಬರಹಗಾರ್ತಿಯರಿಗೆ ಅನಿಸಿದ್ದು ಸಹಜವೆ.

ಮೌಲ್ಯಗಳ ಜಗತ್ತಿನಲ್ಲಿ ಮೌಲ್ಯ ಶೋಧಕಳಾದ ಸ್ತ್ರೀ, ಪುರುಷ ಸ್ಥಾಪಿತ ಮೌಲ್ಯಗಳಿಗೆ ವಿರುದ್ಧವಾಗಿ ಸ್ತ್ರೀ ಪಾತ್ರಗಳ ಚಿತ್ರಣಗಳನ್ನು ನಿರ್ಮಿಸಲು ಮುಂದಾದಳು. ಗಂಡುಬೀರಿಯ ಪಾತ್ರ ಚಿತ್ರಣ, ಭಾವನೆಗಳಿಗೆ ಸ್ಪಂದಿಸದಿರುವಿಕೆ, ಸಂಬಂಧಗಳಿಗೆ ಬೆಲೆ ನೀಡದಿರುವಿಕೆ, ಕುಟುಂಬದಿಂದ ಹೊರಬರುವಿಕೆ, ಲೈಂಗಿಕ ಸ್ವೇಚ್ಛಾಚಾರ, ಕುಡಿತ ಮುಂತಾದ ಸ್ತ್ರೀಪಾತ್ರಗಳ ಚಿತ್ರಣಕ್ಕೆ ತೊಡಗಿದರು. ಈ ಸಂದರ್ಭದಲ್ಲಿ ಸಾಂಪ್ರದಾಯಿಕ ಎಲ್ಲಾ ಮೌಲ್ಯಗಳನ್ನು ತಿರಸ್ಕರಿಸಿ ಹೊಸಮೌಲ್ಯಗಳನ್ನು ಕಟ್ಟಲು ಸಾಧ್ಯ'ವಾದ ಮಹಿಳೆಯರಿಗೆ ಭಾಷೆಯೊಳಗಿನ ಪುರುಷ ಪ್ರಾಧಾನ್ಯತೆಯನ್ನು ಮೀರುವ ರಚನೆಗಳು ಸಾಧ್ಯವಾಗಿದೆಯೇ?

ಸೃಜನಶೀಲ ನೆಲೆಯಲ್ಲಿ ಮಹಿಳೆಯೇ ತನ್ನ ಸ್ವಂತ ಅನುಭವಗಳನ್ನು ತಾನೇ ಅಭಿವ್ಯಕ್ತಿಸುವ ಮೂಲಕ ಹೊಸ ಸ್ತ್ರೀ ಸಂಸ್ಕೃತಿಯೊಂದನ್ನು ಸೃಷ್ಟಿಸಿದರೂ ಸಂವೇದನೆ ಅವಳ ಸ್ವಂತದ್ದಾಯಿತೆ ವಿನಃ ಅಭಿವ್ಯಕ್ತಿಸುವ ಭಾಷೆ ಅವಳದ್ದಾಗಿರಲಿಲ್ಲ. ಭಾಷೆ ಪುರುಷ ಸಂಸ್ಕೃತಿಯದೇ ಒಂದು ಉತ್ಪಾದನೆಯಾಗಿರುವುದರಿಂದ ಪಿತೃಪ್ರಧಾನ ಸಾಂಕೇತಿಕ ವ್ಯವಸ್ಥೆ ಭಾಷೆಯೊಳಗೆ ತನ್ನದೇ ಆದ ತಾತ್ವಿಕತೆಯನ್ನು ಕೊರೆದಿಟ್ಟಿದೆ ಎಂಬ ಸತ್ಯವನ್ನು ಮರೆಯುವಂತಿಲ್ಲ.

ಮಹಿಳೆ ಪ್ರಜ್ಞಾಪೂರ್ವಕ ನೆಲೆಯಲ್ಲಿ ಹೊಸ ಭಾಷೆಯನ್ನು ಸೃಷ್ಟಿಸಿಕೊಳ್ಳಬೇಕು ಎಂದು ಮಾತನಾಡಿದರೂ ಅಪ್ರಜ್ಞಾಪೂರ್ವಕ ನೆಲೆಯಲ್ಲಿ ಅವಳಿಗಿನ್ನು ಹೊಸ ಭಾಷಾ ಸೃಷ್ಟಿ ಸಾಧ್ಯವಾಗಿಲ್ಲವೆಂದು ಹೇಳಬಹುದು. ಅದರಲ್ಲೂ ಸಾಹಿತ್ಯದ ಸಂದರ್ಭದಲ್ಲಿ ನಾವು ಗುರುತಿಸುವಂತೆ ಪಂಪನ ಭಾಷಾ ಶೈಲಿ, ಕುವೆಂಪು ಭಾಷಾ ಶೈಲಿ, ಅಡಿಗರ ಭಾಷಾ ಶೈಲಿ ಎಂದು ಯಾವುದೇ ಒಬ್ಬ ಮಹಿಳಾ ಬರಹಗಾರ್ತಿಯ ಭಾಷಾ ಶೈಲಿಯನ್ನು ಗುರುತಿಸುವುದಕ್ಕೆ ಸಾಧ್ಯವಾಗಿದೆಯೇ?

ಹೊಸಭಾಷೆಯ ಸೃಷ್ಟಿಯ ಮಾತಂತಿರಲಿ ಸ್ತ್ರೀಸೂಚಕ ಪದಗಳ ಬಳಕೆಯ ಸಂದರ್ಭದಲ್ಲೂ ಕೂಡ ಪುರುಷ ವಾಚಕಗಳನ್ನು ಬಳಸಿರುವ ಉದಾಹರಣೆಗಳು ಸ್ತ್ರೀ ಸಾಹಿತ್ಯದಲ್ಲಿ ವಿಪುಲವಾಗಿ ದೊರೆಯುತ್ತವೆ.

ಉದಾ: 'ಪುಗಸಟ್ಟೆಬರುವುದು ಯಾವುದಿಲ್ಲ ಹಾಗೆ
ನೋಡಿದರೆ ಮನುಷ್ಯನೆ ' [೧೧]

ವೈದೇಹಿಯವರ 'ಅವಲಂಬಿತರು' ಕಥೆಯಲ್ಲಿ ಲೇಖಕಿ ಅಹಲ್ಯ ಎಂಬ ಹೆಣ್ಣನ್ನು ಕುರಿತು ಮಾತನಾಡುವಾಗಲೂ ಸ್ತ್ರೀಸೂಚಕ ಪದವನ್ನು ಬಳಸಿಲ್ಲ. 'ಮನುಷ್ಯ' ಎಂಬ ಪುರುಷ ವಾಚಕ ಪದವನ್ನೇ ಬಳಸಲಾಗಿದೆ. ಇಲ್ಲಿ 'ಮನುಷ್ಯಳೆ' ಎಂಬ ಪದ ಬಳಸಬಹುದಾಗಿತ್ತು. ಅಥವಾ ಇತ್ತೀಚಿನ ದಿನಗಳಲ್ಲಿ ಸೃಷ್ಟಿಸಿಕೊಂಡಿರುವ 'ಮಾನುಷಿ' ಎಂಬ ಪದವನ್ನು ಬಳಸಬಹುದಿತ್ತು. ಆದರೆ ಬಳಸಿಲ್ಲ ಭಾಷೆಯನ್ನು ಇದು ಸ್ತ್ರೀ ಸೂಚಕ, ಇದು ಪುರುಷ ಸೂಚಕ ಎಂದು ಅಷ್ಟು ಪ್ರಜ್ಞಾಪೂರ್ವಕವಾಗಿ ಬಳಸುವ ಪರಿ ಇನ್ನು ನಮ್ಮಲ್ಲಿ ಎಲ್ಲರಲ್ಲಿಯೂ ಸಾಧ್ಯವಾಗಿಲ್ಲವೆಂದು ಹೇಳಬಹುದು. ಅದರಲ್ಲೂ ಸಮುದಾಯ ವಾಚಕ ಪದಗಳಂತು ಎಲ್ಲಾ ಕಡೆ ಪುರುಷವಾಚಕಗಳೇ ಆಗಿವೆ. ಉದಾಹರಣೆಗೆ-

> ''ಆ ಊರಿನವರೆಲ್ಲರೂ ಹುಚ್ಚರೂ ಮಾತಿಗಾರಂಭಿಸಿದರೆ ಕತ್ತಲಾದರೂ ಒಬ್ಬನೂ ಮುಗಿಸುವುದೇ ಇಲ್ಲ. ಯಾರಾದರೂ ಸತ್ತರಂತು ಶವ ಸಂಸ್ಕಾರವಾಗುವವರೆಗೂ ಯಾವೊಬ್ಬ ಬ್ರಾಹ್ಮಣನು ಊಟಮಾಡುವುದೇ ಇಲ್ಲವಂತೆ''[೧೨]

ಒಂದು ಊರಿನಲ್ಲಿ ಹುಚ್ಚರಂತೆ ಹುಚ್ಚಿಯರೂ ಇರುತ್ತಾರೆ. ಬ್ರಾಹ್ಮಣನಿದ್ದಂತೆ, ಬ್ರಾಹ್ಮಣಿಯೂ ಇರುತ್ತಾಳೆ. ಆದರೆ ಒಟ್ಟಾರೆ ಆ ಇಡೀ ಸಮುದಾಯವನ್ನು ಉದ್ದೇಶಿಸಿ ಮಾತನಾಡುವಾಗ ಪುರುಷ ವಾಚಕಗಳನ್ನೇ ಮಹಿಳಾ ಬರಹಗಾರ್ತಿಯರೂ ಕೂಡ ಬಳಸುತ್ತಾರೆ. ಹೀಗಿರುವಾಗ ಹೊಸ ಸ್ತ್ರೀ ಭಾಷಾ ಸೃಷ್ಟಿಯ ಮಾತು ಸಾಧ್ಯವಾಗುತ್ತದೆಯೇ?

ಒಂದು ವೇಳೆ ವಾಕ್ಯದಲ್ಲಿ ಸ್ತ್ರೀ ಸೂಚಕಗಳು ಮತ್ತು ಪುರುಷ ಸೂಚಕಗಳು ಎರಡನ್ನು ಬಳಸಿ ಪ್ರಯೋಗಿಸಿದರೆ,

> ''ಆ ಊರಿನವರೆಲ್ಲರೂ ಹುಚ್ಚ-ಹುಚ್ಚಿಯರು, ಮಾತಿಗಾರಂಭಿಸಿದರೆ ಕತ್ತಲಾದರೂ ಮುಗಿಸುವುದೇ ಇಲ್ಲ. ಯಾರಾದರೂ ಸತ್ತರಂತೂ ಶವ ಸಂಸ್ಕಾರವಾಗುವವರೆಗೂ ಯಾವೊಬ್ಬ ಬ್ರಾಹ್ಮಣ, ಯಾವೊಬ್ಬಳು ಬ್ರಾಹ್ಮಣಿಯೂ ಊಟ ಮಾಡುವುದೇ ಇಲ್ಲವಂತೆ''

ಈ ರೀತಿಯ ಪ್ರಯೋಗದಿಂದ ಸಾಹಿತ್ಯದ ಸವಿಯಲ್ಲಿ ತೊಡಗಿರುವ ಓದುಗರಿಗೆ ತೊಡಕುಂಟಾಗುವುದಿಲ್ಲವೇ ? ರಚನೆಯಲ್ಲಿ ಏನೋ ಅಸಂಬದ್ಧತೆ ಉಂಟಾಗಿದೆ ಎಂಬ ಭಾವ ಮೂಡುವುದಿಲ್ಲವೇ? ಹಾಗಾದರೆ ಸೃಜನಶೀಲ ನೆಲೆಯಲ್ಲಿ ಸ್ತ್ರೀಯರದೇ ಪ್ರತ್ಯೇಕ ಭಾಷೆಯನ್ನು ಸೃಷ್ಟಿಸುವುದಾದರೂ ಹೇಗೆ ?

ವ್ಯಕ್ತಿ ಕೇಂದ್ರಿತ ನಲೆಯಲ್ಲಿನ ಭಾಷಾ ಬಳಕೆಯಲ್ಲಿಯೂ ಕೂಡ ಪುರುಷ ವಾಚಕ ಪದಗಳನ್ನೇ ಬಳಸಿರುವುದನ್ನು ಗಮನಿಸಬಹುದು. ಇದಕ್ಕೆ ವೀಣಾಶಾಂತೇಶ್ವರ ಅವರ 'ಮುಳ್ಳುಗಳು' ಕಥೆಯ ಒಂದು ಉದಾಹರಣೆಯನ್ನು ಗಮನಿಸುವುದಾದರೆ,

> ಸ್ನಾನದ್ದೂ ಒಂದು ಮಜ. ಬಡಬಡಾ ಒಂದು ನಿಮಿಷದಲ್ಲಿ ನೀರು ಸುರುವಿಕೊಂಡಾದ ನಂತರ ಬಹಳ ಹೊತ್ತಿನವರೆಗೆ ಮೈ ಒರೆಸಿಕೊಳ್ಳುತ್ತಾ ನಿಲ್ಲಬೇಕೆನಿಸುತ್ತದೆ. ಯಾಕೆ ಹೀಗೆ ? ಕಾರಣ ಕೇಳಿದರೆ ಆ ಮಡಿವಂತ ಸಂಸ್ಕೃತ ಲೆಕ್ಚರರ್ ಮಿಸ್ ಕುಲಕರ್ಣಿ 'ಥೂ, ಹೊಲಸು' ಅಂದಳು. ಇದ್ದದನ್ನು ಇದ್ದಂತೆ ಹೇಳಿದರೆ ಹೊಲಸಂತೆ ! ಅವಳಿಗೆಂದೂ ಹಾಗೆನಿಸಿರಲಾರದೇ? ಮತ್ತೇಕೆ ಇಲ್ಲದ ಆತ್ಮವಂಚನೆ? [೧೩]

ಮೇಲಿನ ಉದಾಹರಣೆಯಲ್ಲಿ ಒಂದು ಹೆಣ್ಣು ತನ್ನ ವೈಯಕ್ತಿಕ ಅನುಭವವನ್ನು ವ್ಯಕ್ತಪಡಿಸುವಲ್ಲಿ ಕೂಡ ಪುರುಷವಾಚಕ ಭಾಷೆಯನ್ನೇ ಬಳಸಿರುವುದನ್ನು ಗಮನಿಸಬಹುದು. ಮಡಿವಂತ, ಲೆಕ್ಚರರ್, ಪುರುಷವಾಚಕ ಪದಗಳು.

ಪುರುಷ ಪ್ರಧಾನ ಭಾಷೆ ನಮ್ಮ ಸಾಂಸ್ಕೃತಿಕ ಭಾಗವಾಗಿ ಅಂಗೀಕರಿಸಿಕೊಂಡು ಬಿಟ್ಟಿದ್ದೇವೆ. ಹಾಗೂ ಸದ್ಯದಲ್ಲಿ ಇರುವ ಸಾಂಕೇತಿಕ ವ್ಯವಸ್ಥೆಯನ್ನು ಸಂಪೂರ್ಣವಾಗಿ ಬುಡಮೇಲು ಮಾಡಲು ಸಾಧ್ಯವಾಗಿಲ್ಲ ಸರಿ. ಅಂದರೆ ಭಾಷೆಯೊಳಗಿನ ತಾರತಮ್ಯದ ಭಾವದ ಅರಿವು ಮೂಡುವವರೆಗೂ ಈ ಪರಿಸ್ಥಿತಿ ಮುಂದುವರೆದಿತ್ತು. ಆದರೆ ತರತಮ ಭಾವದ ಅರಿವು ಮೂಡಿದ ಮೇಲೂ ಇದೇ ಪರಿಸ್ಥಿತಿಯಲ್ಲೇ ಮುಂದುವರಿಯುವುದು ಸಾಧ್ಯವೇ ?

ಖಂಡಿತ ಸಾಧ್ಯವಾಗುವುದಿಲ್ಲ. ಬದಲಿಗೆ ಭಾಷೆಯಲ್ಲಿನ ಸ್ಥಾಪಿತ ಅರ್ಥದ ಗ್ರಹಿಕೆಯಲ್ಲಿನ ತಾರತಮ್ಯದ ನಿರಾಕರಣೆಯ ಮುಖಾಂತರ ಆ ಸಾಂಕೇತಿಕತೆಯನ್ನೇ ಪೊಳ್ಳುಮಾಡಿ, ನಾಶಗೊಳಿಸಿ ಭಾಷೆಯ ಅರ್ಥಗ್ರಹಿಕೆಯಲ್ಲೇ ಸಮಾನತೆಯ ಪರಿಕಲ್ಪನೆಯನ್ನು ಪ್ರತಿಯೊಬ್ಬರೂ ಸಾಧಿಸಿಕೊಳ್ಳಬೇಕಾಗುತ್ತದೆ. ಇರುವ ಭಾಷೆಯನ್ನೇ ಸ್ತ್ರೀಯೂ ತನ್ನದಾಗಿಸಿಕೊಳ್ಳಲು ಪ್ರಯತ್ನಿಸಬೇಕು. ನಮ್ಮ ಸಂಕುಚಿತ ಅರ್ಥಗ್ರಹಿಕೆಯ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಬೇಕು.

ಭಾಷೆ ಮೂಲತಃ ಗ್ರಹಿಕೆ ಅಷ್ಟೇ. ಇರುವ ಭಾಷೆಯನ್ನು ಸ್ತ್ರೀ ಬಳಸಿದರೆ ಅದು ಸ್ತ್ರೀಭಾಷೆ, ಪುರುಷ ಬಳಸಿದರೆ ಪುರುಷ ಭಾಷೆಯಾಗುತ್ತದೆ. ಭಾಷೆಯಲ್ಲಿನ 'ಗಂಡುತನ' ಅಥವಾ 'ಹೆಣ್ಣುತನ' ಎಂಬುದು ಕಲ್ಪಿತವಾಸ್ತವ. ಭಾಷೆಯಲ್ಲಿನ ಗುಣ, ತನ, ಭಾವ, ವಿಚಾರ, ಕ್ರಿಯೆ ಏನೇ ಆಗಲಿ ಅವು ಸ್ತ್ರೀ-ಪುರುಷ ಇಬ್ಬರಿಗೂ ಸಮಾನವಾಗಿ ಅನ್ವಯವಾಗುವಂಥವುಗಳು. ಇವು ಪುರುಷನಿಗೆ ಮಾತ್ರ, ಇವು ಸ್ತ್ರೀಯರಿಗೆ ಮಾತ್ರ ಸೀಮಿತ ಎಂದು ವಿಭಾಗಿಸಲಾಗುವುದಿಲ್ಲ. ಆದರೂ ಪುರುಷ ಪ್ರಧಾನ ವ್ಯವಸ್ಥೆಯ ತಾರತಮ್ಯದ ದೃಷ್ಟಿಯಿಂದ ವಿಭಜನೆಯಾಗಿದ್ದರೂ ಅವುಗಳನ್ನು ನಿರಾಕರಿಸಿ ಇಬ್ಬರಿಗೂ ಅನ್ವಯವಾಗುವ ಸಮಾನ ನೆಲೆಯ ಅರ್ಥಗ್ರಹಿಕೆಯನ್ನು ಇಂದು ಸಾಧಿಸಿಕೊಳ್ಳಬೇಕಾಗಿದೆ. ಅಂದರೆ ಇಂದು ಸ್ತ್ರೀ ಭಾಷೆಯೊಳಗಿನ ಪುರುಷ ನಿರ್ಮಿತ ಮೌಲ್ಯಗಳ ಕಲ್ಪನೆಯನ್ನು ವಿಸ್ತರಿಸಿಕೊಳ್ಳಬೇಕಾಗಿದೆ ಅಥವಾ ತನ್ನದಾಗಿ ಸಾಧಿಸಿಕೊಳ್ಳಬೇಕಾಗಿದೆ. ಆದರೆ ಅಭಿವ್ಯಕ್ತಿಯ ಕ್ರಮದಲ್ಲಿ ಗಂಡು - ಹೆಣ್ಣುಗಳಲ್ಲಿ ಭಿನ್ನತೆ ಇರುತ್ತದೆ. ಅಭಿವ್ಯಕ್ತಿ ಸ್ತ್ರೀಯರದ ಅಥವಾ ಪುರುಷರದ ಎಂಬುದರಿಂದ ಮಾತ್ರ ಅದು ಸ್ತ್ರೀಭಾಷೆ, ಪುರುಷ ಭಾಷೆ ಎಂದಾಗುತ್ತದೆ ಎಂಬ ಸರಳ ವಾಸ್ತವವನ್ನು ಮರೆಯುವಂತಿಲ್ಲ.

ಈ ಹಿನ್ನೆಲೆಯಲ್ಲಿ ಪುರುಷರಿಗೆ ಮಾತ್ರ ಸೀಮಿತವಾದ ಭಾಷೆಯನ್ನು ತನ್ನದಾಗಿಸಿಕೊಳ್ಳುವಿಕೆಯ ಮುಖಾಂತರ ಸ್ಥಾಪಿತ ಮೌಲ್ಯವ್ಯವಸ್ಥೆಯ ವಿರುದ್ಧ ಹೊಸಮೌಲ್ಯ ವ್ಯವಸ್ಥೆಯನ್ನು ರೂಪಿಸಿಕೊಂಡ ವೀಣಾ ಶಾಂತೇಶ್ವರ ಅವರ ಬರಹವನ್ನು ಗಮನಿಸಬಹುದು.

**ನವ ಮಹಿಳೆಯ ಶೋಧನಾತ್ಮಕ ಮೌಲ್ಯ**

ವೀಣಾ ಶಾಂತೇಶ್ವರ ಅವರ ಕಾದಂಬರಿಗಳ ಸ್ತ್ರೀಪಾತ್ರಗಳು ಪ್ರತಿಯೊಂದು ಹಂತಗಳಲ್ಲೂ ಮೌಲ್ಯಗಳ ಜಗತ್ತಿನಲ್ಲಿ ಮೌಲ್ಯಶೋಧಕರಾಗಿ ಗುರಿಯಿಲ್ಲದ ಹುಡುಕಾಟದಲ್ಲಿ ತೊಡಗಿರುತ್ತವೆ. ಇಲ್ಲಿ ಆಧುನಿಕ ಸ್ವತಂತ್ರ ಮನೋವೃತ್ತಿಯ ಸ್ತ್ರೀಪಾತ್ರಗಳೆಂದು ಕರೆಯಬಹುದಾದ ಹೆಣ್ಣುಗಳನ್ನು ಕಾಣಬಹುದು.

ಬಹುಶಃ ವೀಣಾ ಪುರುಷ ಲೇಖಕರು ಸೃಷ್ಟಿಸಿದ ಹೆಣ್ಣಿನ ಮೌಲ್ಯಗಳಿಗೆ ತದ್ವಿರುದ್ಧವಾದ ಸ್ತ್ರೀ ಪಾತ್ರಗಳನ್ನು ಸೃಷ್ಟಿಸಬೇಕೆಂಬ ಹಠದಿಂದ ಬರೆದಂತೆ ಕಾಣುತ್ತದೆ. ಗಂಡು-ಹೆಣ್ಣಿನ ನಡುವಣ ಸಂಬಂಧವನ್ನು ಅದರಿಂದ ಉಂಟಾಗುವ ಸಂಘರ್ಷವನ್ನು ವೀಣಾ ತಮ್ಮ ಕಾದಂಬರಿಗಳಲ್ಲಿ ನಿರ್ವಹಿಸಿರುವ ರೀತಿ ಕೂಡ ಪುರುಷ ಲೇಖಕರಿಗಿಂತ ಭಿನ್ನವಾಗಿದೆ. ಇಲ್ಲಿನ ಹೆಣ್ಣಿನ ದೃಷ್ಟಿಕೋನ, ಅವಳ ಅನುಭವ, ಅವಳ ಕಲ್ಪನೆ, ಅವಳು ಪ್ರತಿಪಾದಿಸುವ ಮೌಲ್ಯ ಎಲ್ಲವೂ ನವನವೀನವಾದವುಗಳೇ. ಈ ಹಿನ್ನೆಲೆಯಲ್ಲಿ ಹೆಣ್ಣಿನದೇ ಅನುಭವಗಳನ್ನು, ಕಲ್ಪನೆಗಳನ್ನು ಹೆಣ್ಣಿನದೇ ಭಾಷೆಯಲ್ಲಿ ವೀಣಾ ನಿರೂಪಿಸಿದ್ದಾರೆಯೇ? ಹೆಣ್ಣಿಗೆ ವಿಶಿಷ್ಟವಾದ ಭಾಷೆಯನ್ನು ಅವರು ರೂಪಿಸಿ ಬಳಸಿದ್ದಾರೆಯೇ? ಎಂಬುದನ್ನು ಪರಿಶೀಲಿಸುವುದಾದರೆ,

ಪುರುಷ ಸ್ಥಾನೀಯ ಭಾಷೆಯಲ್ಲಿ ಸ್ತ್ರೀಯರಿಗೆ ಮಾತ್ರ ಅನ್ವಯವಾಗುವ ಸ್ತ್ರೀ ಲಿಂಗಾಂಕಿತಗಳಾದ ಪಾತಿವ್ರತ್ಯ, ಕುಟುಂಬಿನಿ, ಸಹಧರ್ಮಿಣಿ, ಕಾಪಿಡುವಿಕೆ, ಸಹನಾಶೀಲತೆ, ಮುಂತಾದ ಪಾರಂಪರಿಕ ಸ್ತ್ರೀ ಮೌಲ್ಯಗಳ ಮರಿಯುವಿಕೆಯನ್ನು ವೀಣಾರವರ ಬರಹದ ಬಹಳ ಮುಖ್ಯವಾದ ಶೈಲಿ ಎಂದು ಪರಿಗಣಿಸಬಹುದು ಉದಾಹರಣೆಗೆ-

> ''ಶಶಿ ನನಗೆ ರೋಮ್ಯಾಂಟಿಕ್ ಫೂಲ್ ಅನ್ನುತ್ತಾಳೆ. ಅವಳ ದೃಷ್ಟಿಯಲ್ಲಿ ಪ್ರೇಮ ಎನ್ನುವುದು ಬರೀ ಭ್ರಮೆ. ಮದುವೆ ಅನ್ನುವುದು ಒಂದು ವ್ಯಾವಹಾರಿಕ ಒಪ್ಪಂದ. ಮದುವೆ, ಪತಿವ್ರತೆ, ಪ್ರೇಮ, ಬಂಧನ, ಇವೆಲ್ಲಾ ಬೋಗಸ್ ಶಬ್ಧಗಳು. ಇವುಗಳ ಬೆನ್ನಟ್ಟಿದ ವ್ಯಕ್ತಿಗೆ ಅಂತ್ಯದಲ್ಲಿ ದೊರಕುವುದು ದುಃಖ ನಿರಾಸೆ ಕಟ್ಟಿಟ್ಟದ್ದು.''[೧೪]

ಇಲ್ಲಿನ ಸ್ತ್ರೀ ಪಾತ್ರಗಳಿಗೆ ಪಾರಂಪರಿಕ ಸ್ತ್ರೀ ಮೌಲ್ಯಗಳೆಲ್ಲ ಬರೀ ಬೋಗಸ್‌ಗಳು ಅಷ್ಟೇ ಆಗಿವೆ.

ಹೆಣ್ಣಿನ ಭಾಷೆ ಅತೀ ಭಾವುಕತೆಯಿಂದ ಕೂಡಿರುತ್ತದೆ ಎಂದು ಹೇಳಲಾಗುತ್ತದೆ. ಪ್ರಾರಂಭಿಕ ಹಂತದಲ್ಲಿ ರಚಿತವಾದ ಸ್ತ್ರೀ ಬರವಣಿಗೆಗಳು ಅತೀ ಭಾವುಕತೆಯಿಂದ ಕೂಡಿದ್ದರೂ ಕೂಡ ಅದನ್ನು ಮೀರಲು ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಸಾಧ್ಯವಾಗಿದೆ ಎಂದು ಹೇಳಬಹುದು. ಅದರಲ್ಲೂ ವೀಣಾರವರ ಬರವಣಿಗೆಯಲ್ಲಿ ಅತೀ ಭಾವುಕ ಅಂಶಗಳ ಸುಳಿವು ಕೂಡ ಸಿಗುವುದಿಲ್ಲ. ಇಲ್ಲಿನ ನಾಯಕಿಯರು ಯಾವುದೇ ಭಾವನೆಗಳಿಗೆ ಭಾವುಕವಾಗಿ ಕಟ್ಟಿಬೀಳುವವರಲ್ಲ.

> "ತನ್ನ ಲಗ್ನವಾದ ವರ್ಷವೆ ಅವ್ವನಿಗೆ ಸೀರಿಯಸ್ ಬ್ಲಡ್‌ಪ್ರೆಶರ್ ಆಯಿತು. ಒಂದೇ ಸಮನೆ ಕೆಮ್ಮು ಹತ್ತಿ ಶ್ವಾಸ ಸಿಕ್ಕಿ ಹಾಕಿಕೊಂಡು, ಈಗಲೇ ಸತ್ತೇ ಬಿಡುವಳೇನೋ ಎಂದು ಆಸೆ ಹುಟ್ಟಿಸಿ, ಮತ್ತೆ ನೆಟ್ಟಗಾಗಿ ಮತ್ತೆ ಹೀಗೆ ಆಗಿ, ನಾಲ್ಕು ತಿಂಗಳು ಒದ್ದಾಡಿ ಕಡೆಗೆ ಸತ್ತಳು ಅವ್ವ. ಅವ್ವನ ಹೆಣದ ಮೇಲೆ ಬಿದ್ದು ಅತ್ತರು ತಮ್ಮ-ತಂಗಿ-ಅಕ್ಕ ಎಲ್ಲರೂ. ಸುಮ್ಮನೇ ಕೂತಿದ್ದ ತನ್ನನ್ನು ನೋಡಿ ಕೂಡಿದ ಆಪ್ತರಲ್ಲಿನ ಇಬ್ಬರು ಮುದುಕಿಯರು ಗುಸುಗುಸು ಪಿಸುಪಿಸು ನಡೆಸಿದಾಗ ಎಂದಿನಂತೆ ಕೇಳದೆಯೇ ನೆರವಿಗೆ ಬಂದಿದ್ದ ಸತೀಶ. 'ಈಕೀಗೆ ಭಾಳ ಶಾಕ್ ಆಗೇದ್ರೀ ರಮಾಬಾಯರ, ಅದಕ್ಕ ಕಣ್ಣಾಗ ನೀರು ಬರವೊಲ್ಲವು. ಅವ್ವನ ಮ್ಯಾಲೆ ಭಾಳ ಜೀವ ಈಕೀಗೆ ಸತೀಶ್‌ನ ಲಾಜಿಕ್ ಎಂದಿನಂತೆ ಆಗಲೂ ತಪ್ಪಾಗಿತ್ತು"[೧೫]

ತಾಯಿ ಸತ್ತಾಗಲೂ ಕೂಡ ಆಕೆ ಅತೀ ಭಾವುಕಳಾಗಿ ವರ್ತಿಸದೆ, ಅದೊಂದು ವಾಸ್ತವ ಕ್ರಿಯೆ ಎಂದೇ ತಿಳಿದು ವರ್ತಿಸುತ್ತಾಳೆ.

ಇಲ್ಲಿನ ಸ್ತ್ರೀಪಾತ್ರಗಳು ಸಾಂಪ್ರದಾಯಕ ಸ್ತ್ರೀತ್ವದ ಕಲ್ಪನೆಯ ಸ್ತ್ರೀಪಾತ್ರಗಳಲ್ಲ. ಮಕ್ಕಳ ಲಾಲನೆ-ಪಾಲನೆ, ಗಂಡನ ಯೋಗಕ್ಷೇಮದ ವಿಚಾರಗಳು ಎಂದೂ

''ಅಂದ್ರೆ? ಬೇಕಾದಾಗ ಬೇಕಾದವರ್ನ ಕೂಡಿ ಸಾಕಾದ ಕೂಡ್ಲೇ ಗುಡ್‌ಬಾಯ್ ಅನ್ನೋದು. ಯಸ್ ಸಿಂಪಲ್ ಖಾವೋ ಪೀವೋ ಮಜಾಕರೋ ಫಿರ್ ಆಗೇ ಬಡೋ, ಬಾಕೀ ಸಬ್ ಭೂಲ್ ಜಾವೋ.[೧೯]

''....... ನಾ ಪುರುಷ ದ್ವೇಷಿ ಅಲ್ಲ ಕಮಲಾ. ಸುಖಾಆನಂದ ಬ್ಯಾಡನ್ನುದಿಲ್ಲ ನಾನು. ಆದರೆ ಈಪ್ರೀತಿ - ಬಂಧನ ಅಂತೀಯಲ್ಲಾ ಅದು ಬ್ಯಾಡಂತೀನಿ ಯಾಕಂದರ ಅಂಥದ್ದು ಅಸ್ತಿತ್ವದೊಳಗೇ ಇಲ್ಲ.ಗಂಡು- ಹೆಣ್ಣಿನ ಸಂಬಂಧದ ಸುಖಾ ಇರ್ಲಿ ಅದರ ಆ ಸಂಬಂಧ ಕೊರಳಿಗೆ ಉರಲು ಆಗೋದು ಬ್ಯಾಡ ಅಂತೀನಿ [೨೦]

...........ಇಬ್ಬರೂ ಕೂಡಿ ಪಿಕ್ಚರ್ ನೋಡುವ ಹಾಗೆ ಚಹಾ ಕುಡಿಯುವ ಹಾಗೆ ಇವತ್ತ ಐಸ್‌ಕ್ರೀಂ ತಿಂದ ಹಾಗೆ, ಇಬ್ಬರೂ ಮಲಗುವುದು ಸಹಾ ನಮ್ಮ ಗೆಳೆತನದ ವಿಸ್ತಾರದ ಒಂದು ಬಗೆ ....[೨೧]

ಹೀಗೇ ಶೋಷಣೆ ಬಂಡಾಯ ಇತ್ಯಾದಿ ಕಾದಂಬರಿಯ ನಾಯಕಿ ತನ್ನ ಹಾಗೂ ತನ್ನ ಗೆಳೆಯನ ನಡುವಿನ ದೈಹಿಕ ಸಂಬಂಧದ ಬಗ್ಗೆ ತನಗೆ ಉದ್ವೇಗವಾಗಲೀ, ಸಂಕೋಚವಾಗಲೀ, ನಾಚಿಕೆಯಾಗಲೀ ಇಲ್ಲದೆ ಮುಕ್ತವಾಗಿ ಅಭಿವ್ಯಕ್ತಿಸುತ್ತಾಳೆ. ತಮ್ಮ ವೈಯುಕ್ತಿಕ ವಿಚಾರಗಳ ಅಭಿವ್ಯಕ್ತಿಗೆ ಯಾವುದೇ ಮಡಿವಂತಿಕೆ,ನೈತಿಕತೆಯ ಪರದೆ ಎಳೆಯದೆ ಮುಕ್ತವಾಗಿ ಅಭಿವ್ಯಕ್ತಿಸುವಿಕೆ ಇಲ್ಲಿನ ಸ್ತ್ರೀಪಾತ್ರಗಳಿಗೆ ಸಾಧ್ಯವಾಗಿದೆ. ಇಲ್ಲಿನ ಸ್ತ್ರೀಪಾತ್ರಗಳಲ್ಲಿ ನೈತಿಕ ಎಚ್ಚರವಿಲ್ಲ ಬದಲಿಗೆ ವೈಚಾರಿಕ ಎಚ್ಚರ ಸದಾ ಜಾಗೃತಗೊಂಡಿರುತ್ತದೆ. ಇವರಿಗೆ ನೈತಿಕತೆ,ಅನೈತಿಕತೆ ಎಂಬ ಪ್ರಶ್ನೆಗಳು ಎಂದು ಭಾದಿಸುವುದೇ ಇಲ್ಲ

''ಹೆಣ್ಣುಮಕ್ಕಳ ಒಳನೋಟವನ್ನು ನಿರ್ಭೀತಿಯಿಂದ ಯಾವುದೇ ಮೈ ಚಳಿ ಇಲ್ಲದೆ ಇವರಷ್ಟು ದಿಟ್ಟವಾಗಿ,ಕಲಾತ್ಮಕವಾಗಿ ಅಭಿವ್ಯಕ್ತಿಸುತ್ತಿರುವ ಇನ್ನೊಬ್ಬ ಲೇಖಕಿ ಕನ್ನಡದಲ್ಲಿ ಇಲ್ಲ ಎನ್ನಬಹುದು.''[೨೨] ಎಂಬ ಶ್ರೀಕೃಷ್ಣ ಆಲನಹಳ್ಳಿಯವರ ಮಾತು ಒಪ್ಪುವಂಥದ್ದು.

ಮುಕ್ತ ಅಭಿವ್ಯಕ್ತಿಯೇ ಬಹಳ ದೊಡ್ಡ ಸಾಧನೆ. ಆ ದನಿ ಪಡೆದುಕೊಳ್ಳುವುದೇ ಭಾಷೆಯನ್ನು ರೂಪಿಸಿಕೊಳ್ಳುವ ಮೊದಲ ಹಂತ.

ಯಾವುದೇ ವಿಚಾರದಲ್ಲಾಗಲೀ ಹೆಣ್ಣಿನ ಭಾಷೆ ಖಚಿತತೆಯನ್ನು ಒಳೊಂಡಿರುವುದಿಲ್ಲ, ದೃಢನಿರ್ಧಾರವನ್ನು ಕೈಗೊಳ್ಳುವುದಿಲ್ಲ. ಇದು ಹೆಣ್ಣಿನ ಭಾಷೆಯ ಲಕ್ಷಣ ಎಂದು ಹೇಳುವ ಪುರುಷ ತಾತ್ವಿಕತೆಯ ಹಿನ್ನೆಲೆಯಲ್ಲಿ ವೀಣಾರವರ ಬರಹವನ್ನು ಪರಿಗಣಿಸುವುದಾದರೆ, ಇಲ್ಲಿನ ಸ್ತ್ರೀಪಾತ್ರಗಳು ಅಭವ್ಯಕ್ತಿಸುವ ಭಾಷೆ ಖಚಿತತೆಯನ್ನು ಒಳಗೊಂಡಿದ್ದು ದೃಢನಿರ್ಧಾರಗಳನ್ನು ಕೈಗೊಳ್ಳುವಲ್ಲಿ ಯಶಸ್ವಿಯಾಗಿವೆ ಎಂದು ಹೇಳಬಹುದು. ಇದನ್ನು ಒಂದು ಉದಾಹರಣೆಯ ಮೂಲಕ ಸ್ಪಷ್ಟಪಡಿಸಿಕೊಳ್ಳುವುದಾದರೆ,

> 'ಆಕೆ ಧಡಕ್ಕನೆ ಎದ್ದಳು. ದೃಡವಾದ ಹೆಜ್ಜೆಗಳಿಂದ ಟೇಬಲ್ ಸಮೀಪ ಹೋಗಿ ಕೂತಳು. ಡ್ರಾಯರಿನಿಂದ ಬಿಳಿ ಕಾಗದ ತೆಗೆದು ರಜಾಚೀಟಿ ಬರೆದಷ್ಟೆ ನಿಶ್ಚಲತೆಯಿಂದ ಅದರ ಮೇಲೆ ಬರೆದಳು. ನನ್ನನ್ನು ಕ್ಷಮಿಸು.ಕೆನಡಾಕ್ಕೆ ಹೋಗುವುದನ್ನು ಕ್ಯಾನ್ಸಲ್ ಮಾಡುವುದು ಈಗ ಸಾಧ್ಯವಿಲ್ಲ. ಬಹಳ ತಡವಾಯಿತು.ನಾಳೆಯೇ ನಾನು ಅದರ ಪೂರ್ವ ತಯಾರಿಗಾಗಿ ಮುಂಬೈಗೆ ಹೋಗುತ್ತೇನೆ. ನೀನು ಹಿಂದಿರುಗಿ ಬಂದಾಗ ನಾನಿರುವುದಿಲ್ಲ. ನಮ್ಮ ದಾರಿ ಕವಲೊಡೆದಿದೆ.' [೨೩]

ಕವಲು ಕಥೆಯ ಮಿನಿ ಬಹಳಷ್ಟು ವರ್ಷಗಳು ವಿವಾಹಿತ ಪುರುಷನೊಂದಿಗೆ ಸಂಬಂಧ ಹೊಂದಿದ್ದರೂ ಅದರಿಂದ ಸುಖ ಪಡೆದಂತೆ ಕೊರತೆಯನ್ನು ಅನುಭವಿಸಿರುತ್ತಾಳೆ. ಅವರ ಸಂಬಂಧದಿಂದ ಹೊರ ಸರಿದು ಹೊರ ದೇಶಕ್ಕೆ ಹೊರಡಲು ನಿರ್ಧರಿಸುತ್ತಾಳೆ. ಇದೇ ಸಮಯದಲ್ಲಿ ಅವನ ಹೆಂಡತಿ ಸತ್ತು ಹೋಗುವುದರಿಂದ ಅವನು ತನ್ನನ್ನು ಪೂರ್ಣವಾಗಿ ಮಿನಿಗೆ ಒಪ್ಪಿಸಿಕೊಳ್ಳುವ ಇಂಗಿತವನ್ನು ವ್ಯಕ್ತಪಡಿಸುತ್ತಾನೆ. ಆಗ ಮಿನಿಯ ಮೇಲಿನ ಮಾತು ಅವರ ಜೀವನ, ಮನಸ್ಸು ಎರಡೂ ಕವಲೊಡೆದ ಮತ್ತೆಂದು ಒಂದಾಗಲೂ ಸಾಧ್ಯವೇ ಇಲ್ಲದ ದೃಢ ನಿರ್ಧಾರವನ್ನು ವ್ಯಕ್ತಪಡಿಸುತ್ತದೆ.

ವೀಣಾರವರ ಸ್ತ್ರೀ ಪಾತ್ರಗಳ ತಾತ್ವಿಕತೆ, ಪ್ರೀತಿ, ಕಾಮ, ಸಮಾಜ, ಕುಟುಂಬಗಳ ಪಾರಂಪರಿಕ ಕಲ್ಪನೆಗಿಂತ ಸಂಪೂರ್ಣ ಭಿನ್ನವಾದದ್ದು. ಪ್ರೇಮ ಎಂಬುದು ಮಾನಸಿಕ

ಅಸ್ವಸ್ಥತೆಯ ಸ್ಥಿತಿ. ಅದಕ್ಕೆ ಬಲಿಯಾದ ಮಹಿಳೆ ತನ್ನ ಶೋಷಕನನ್ನೇ ಉದ್ಧಾರಕನೆಂದು ಭ್ರಮಿಸುತ್ತಾಳೆ. ಪ್ರೇಮ, ಕಾಮ, ಕುಟುಂಬಗಳು ಮಹಿಳೆಯರನ್ನು ಪುರುಷಾಧೀನವಾಗಿ ಉಳಿಸಿಟ್ಟಿರುವ ಪರಂಪರಾಗತ ಸಂಸ್ಥೆಗಳು.ಈ ಸಂಸ್ಥೆಗಳಿಂದ ಹೆಣ್ಣು ಹೆಚ್ಚು ಹೆಚ್ಚು ಸ್ವತಂತ್ರಳಾದಲ್ಲಿ ಅವಳ ಮೇಲಿನ ಪುರುಷ ಅಧಿಕಾರ ಕುಗ್ಗುತ್ತದೆ ಎಂಬುದು ವೀಣಾರವರ ರಚನೆಗಳ ಹಿಂದಿರುವ ಬಹಳ ದೊಡ್ಡ ತಾತ್ವಿಕತೆ.

ವೀಣಾರವರ ಈ ಹೊಸ ಸ್ತ್ರೀಸಂಸ್ಕೃತಿಯ ತಾತ್ವಿಕತೆ ಅಂತಿಮವಾಗಿ ಸಫಲವಾಗಿದೆಯೇ ? ಈ ತಾತ್ವಿಕತೆ ಅವರ ಎಲ್ಲಾ ಸ್ತ್ರೀ ಪಾತ್ರಗಳಲ್ಲೂ ಸಫಲವಾಗಿಲ್ಲ ಎಂದೇ ಹೇಳಬಹುದು. ಎಲ್ಲಾ ವಿಚಾರದಲ್ಲೂ ಪುರುಷನಿಗೆ ವಿರುದ್ಧವಾದ ನೆಲೆಯಲ್ಲೇ ಹೊಸ ಸ್ತ್ರೀ ತಾತ್ವಿಕತೆಯನ್ನು ಮಂಡಿಸುವ ಇವರ ಸ್ತ್ರೀ ಪಾತ್ರಗಳು ಕೊನೆಗೆ ಆ ಸಾಂಪ್ರದಾಯಿಕ ಪುರುಷ ಮೌಲ್ಯಗಳನ್ನೇ ಒಪ್ಪಿಕೊಂಡು ಮೌನ ತಾಳುತ್ತವೆ ಎಂಬ ಸಂಗತಿಯನ್ನು ಕೂಡ ಮರೆಯುವಂತಿಲ್ಲ. ಹಾಗಾದರೆ ಸೃಜನಶೀಲ ನೆಲೆಯಲ್ಲಿ ಹೊಸ ಸ್ತ್ರೀ ಸಂಸ್ಕೃತಿಯನ್ನು ಸಾಧಿಸಲು ನಿಜವಾಗಿಯೂ ಸಾಧ್ಯವಾಗಿದೆಯೇ ? ಎಂಬುದನ್ನು ಪರಿಶೀಲಿಸುವುದಾದರೆ, 'ತಿರುಗಿ ಹೋದಳು' ಕಥೆಯ ನಾಯಕಿ ಲಕ್ಷ್ಮಿ, ಹಮೀದಾಬಾನುವಿನ ಜೀವನದಲ್ಲಿ ನಡೆಯುತ್ತಿರುವ ಪುರುಷ ದೌರ್ಜನ್ಯವನ್ನು ಸದಾ ಪ್ರತಿಭಟಿಸುತ್ತಲೇ ಇರುತ್ತಾಳೆ.

> ''ನೀನ್ಯಾಕೆ ಆತನನ್ನು ಸೇರಿಸಿಕೊಳ್ಳುತ್ತೀ ಹಮೀದಾ ? ಹೆಂಡತಿ ಮಕ್ಕಳ ಬಗ್ಗೆ ತನ್ನ ಕರ್ತವ್ಯ ತಿಳಿಯದ ಗಂಡನನ್ನು ಬೆಂಕಿ ಹಾಕಿ ಸುಡಬಾರದೆ ? ಆತ ಬಂದಾಗ ಒದ್ದು ಕಳಿಸಬಾರದೇ ? ಅವನಿಂದ ನಿನಗೇನೂ ಸಹಾಯವಿಲ್ಲ, ಲಾಭವಿಲ್ಲ ಮತ್ತೇಕೆ ಅವನು ಬಂದಾಗ ಇಷ್ಟು ಸಡಗರ ಪಡುವುದು ? ಮುಖಕ್ಕೆ ಉಗಿದು ಆಚೆ ನೂಕಬಾರದೆ ಅವನನ್ನು ? ''[೨೪]

ಎಂದು ಗುಡುಗುವ ಲಕ್ಷ್ಮಿ ತನ್ನ ಜೀವನದಲ್ಲಿ ಅದೇ ಸನ್ನಿವೇಶ ಎದುರಾದಾಗ ಇದೇ ರೀತಿಯ ತೀರ್ಮಾನ ತೆಗೆದುಕೊಳ್ಳಲಾರಳು.

> ........ನನಗೆ ಗಂಡ ಬೇಡವೇ? ಈಗಷ್ಟೇ 'ಅಪ್ಪಾ' ಅನ್ನಲು ಕಲಿತಿರುವ ನನ್ನ ಮಗನಿಗೆ ಅಪ್ಪ ಬೇಡವೆ ?[೨೫]

ಎಂದು ಆಲೋಚಿಸಿ ಹೆಣ್ಣು ಸ್ವತಂತ್ರಳಾಗಿ, ಏಕಾಂಗಿನಿಯಾಗಿ ಬದುಕಲು ಕಷ್ಟಎಂಬ ನಿಲುವು ತಳೆದು ಪುನಃ ತನ್ನ ಗಂಡನ ಮನೆಗೆ ತಿರುಗಿ ಹೋಗುತ್ತಾಳೆ. ಇವಳ ಈ ನಿಲುವು ಪಾರಂಪರಿಕ ಮೌಲ್ಯಕ್ಕೆ ತನ್ನನ್ನು ಸೀಮಿತಗೊಳಿಸಿಕೊಂಡಿದ್ದ ಅಮೀದಾ ಬಾನುವಿಗೆ ಆಶ್ಚರ್ಯ ಉಂಟುಮಾಡುತ್ತದೆ. ''ನೀನ್ಯಾಕೆ ಆತನನ್ನು ಒದ್ದು ಓಡಿಸುವುದಿಲ್ಲ ಹಮೀದಾ? ಅಂತ ಅನ್ನಲೇ ಇಲ್ಲವಲ್ಲ ಅಂತ ಹಮೀದಾಬಾನುವಿಗೆ ಆಶ್ಚರ್ಯವೋ ಆಶ್ಚರ್ಯ! [೩೬] ಹಾಗಾದರೆ ಹೊಸ ಸ್ತ್ರೀ ಮೌಲ್ಯಗಳ ಆವಿಷ್ಕಾರ ಮತ್ತೊಬ್ಬ ಮಹಿಳೆಯ ಮೇಲೆ ಹೇರಲು ಮಾತ್ರವೇ ಸೃಷ್ಟಿಯಾದವುಗಳೇ? ತಮ್ಮ ಜೀವನಕ್ಕಲ್ಲವೇ? ಎಂಬ ಪ್ರಶ್ನೆಯನ್ನು ಇವರ ಸಾಹಿತ್ಯ ಹುಟ್ಟಿಸುತ್ತದೆ.

'ಗಂಡಸರು'ಕಾದಂಬರಿಯ ಶಾಂತಿ ಕೂಡ ಗಂಡಸರಿಂದ ನಿರಂತರ ಶೋಷಣೆಗೆ ಒಳಗಾದರೂ ಕೂಡ ಅದರಿಂದ ಬಿಡುಗಡೆಯನ್ನು ಮತ್ತೊಬ್ಬ ಗಂಡಸಿನಿಂದಲೇ ಕಂಡುಕೊಳ್ಳುತ್ತಾಳೆ. 'ಶೋಷಣೆ ಬಂಡಾಯ ಇತ್ಯಾದಿ' ಕಾದಂಬರಿಯ ಶಶಿ ಪುರುಷರ ಅಧಿಕಾರರೂಢ ಮನಸ್ಥಿತಿಯನ್ನು ತಿರಸ್ಕರಿಸುತ್ತಿದ್ದರೂ ಕೊನೆಯಲ್ಲಿ ಆ ಅಧಿಕಾರ ರೂಢತೆಗೆ ಶರಣಾಗಿ ಮೌನ ವಹಿಸುತ್ತಾಳೆ.

> ''ಎಂದಿನಂತೆ ಆತ ಏನಂತೀ ಶಶಿ? ಅಂತ ತನ್ನ ಅಭಿಪ್ರಾಯ ಕೇಳಲಿಲ್ಲವೆಂಬುದೂಶಶಿಯ ಗಮನಕ್ಕೆ ಬರಲಿಲ್ಲ. ಆತನ ಧ್ವನಿಯಲ್ಲಿ ಎಂದಿನ ಅನುನಯ ಆರ್ಜವತೆ ಒಮ್ಮೆಲೆ ಮಾಯವಾಗಿ ಆಗಲೇ ಅಧಿಕಾರದ ಸೆಳಕು ಮಿಂಚಿದಂತೆ ಒಂದು ಕ್ಷಣ ಅನಿಸಿದರೂ ಆ ಅನಿಸಿಕೆಯನ್ನು ಆಚೆ ಕೊಡಹುವಂತೆ ತಲೆ ಅಲ್ಲಾಡಿಸಿ ಶಶಿ ಆತನಿಗಂಟಿಕೊಂಡಂತೆಯೇ ಆತನನ್ನು ಹಿಂಬಾಲಿಸಿದಳು. ಯಾವಾಗಲೂ ನಡೆಯುವಾಗ ಬಿರುಸಿನಿಂದ ರಪ್‌ರಪ್ ಸದ್ದು ಮಾಡುತ್ತಿದ್ದ ಆಕೆಯ ಚಪ್ಪಲಿಗಳು ಇಂದು ಒಮ್ಮೆಲೆ ವಿಧೇಯವಾಗಿ, ನಿಶ್ಯಬ್ಧವಾಗಿ, ಮೌನವಾಗಿರುವಂತೆ ಒಂದುಕ್ಷಣ ಅನಿಸಿದರೂ, ಪ್ರಯತ್ನಪೂರ್ವಕವಾಗಿ ಎಲ್ಲವನ್ನೂ ಅಲಕ್ಷಿಸಿ ಆತನಿಗಿಂತ ಎರಡು ಹೆಜ್ಜೆ ಹಿಂದೆ ಹಿಂದೆ ಆಕೆ ನಡೆದಳು. [೩೭]

ಆಧುನಿಕ ಮಹಿಳಾ ಬರಹಗಾರ್ತಿಯರು ಸಾಂಪ್ರದಾಯಿಕ ಸಾಂಸ್ಕೃತಿಕ ಮೌಲ್ಯಕ್ಕೆ ಪ್ರತೀಕವಾಗುವ ಸ್ತ್ರೀ ಮಾದರಿಗಳಿಗೆ ಬದಲಾಗಿ ಕುಟುಂಬ, ದಾಂಪತ್ಯ, ವಿವಾಹ, ಸಾಮಾಜಿಕ, ಮೌಲ್ಯ, ಮಾನವೀಯ ಸಂಬಂಧಗಳ ವಿಚ್ಛಿದ್ರವಾಗುತ್ತಿರುವ ಸ್ಥಿತ್ಯಂತರ ಕಾಲದ ಸ್ತ್ರೀ ಪ್ರತೀಕಗಳನ್ನು ಹೆಚ್ಚಾಗಿ ಭಾಷಿಕ ಅಭಿವ್ಯಕ್ತಿಯಲ್ಲಿ ಸೃಷ್ಟಿಸಿದರೂ ಕೂಡ ಅಂತಿಮವಾಗಿ ಈ ಪಾರಂಪರಿಕ ಮೌಲ್ಯಗಳನ್ನು ಮೀರಲು ಸಾಧ್ಯವಾಗಿಲ್ಲ ಎಂದು ಹೇಳಬಹುದು.

ಗಂಡು ಮತ್ತು ಹೆಣ್ಣಿನ ಪಾತ್ರದ ವರ್ಗೀಕರಣವನ್ನು ಅಗತ್ಯವೆಂದು ಸಮಾಜ ಒಪ್ಪಿಕೊಂಡುಬಿಟ್ಟಿದೆ. ಹೆಣ್ಣಿಗೆ ನಿಗದಿಯಾದ ಪಾತ್ರ ಆಕೆಯ ಒಟ್ಟು ವ್ಯಕ್ತಿತ್ವದ ವಿಕಾಸಕ್ಕೆ ಪೂರಕವೇ, ಅಲ್ಲವೇ ಎಂಬ ಪ್ರಶ್ನೆ ಗೌಣವಾಗಿ ಬಿಟ್ಟಿದೆ. ಎಂದರೆ ಹೆಣ್ಣಿನ ಆಯ್ಕೆಯ ಪ್ರಶ್ನೆ ಎಂದು ಪ್ರಧಾನವಾಗಲೇ ಇಲ್ಲ. ಎಷ್ಟೋ ವೇಳೆ ಈ ನಿಗದಿತ ಚೌಕಟ್ಟನ್ನು ಮೀರಲು ಯತ್ನಿಸುವ ಹೆಂಗಸರು ವೈಯಕ್ತಿಕವಾಗಿ ಸೋಲು ಕಂಡವರಾಗುತ್ತಾರೆ. ಇಲ್ಲವೆ ಮನೆ ಮುರುಕಿಯರೆನಿಸುತ್ತಾರೆ. ವೀಣಾರವರ ಸ್ತ್ರೀ ಪಾತ್ರಗಳಲ್ಲೂ ಕೂಡ ಇದೇ ಸ್ಥಿತಿ ಮುಂದುವರೆದಿದೆ ಎಂದು ಹೇಳಬಹುದು. ಚೌಕಟ್ಟನ್ನು ಮೀರುವ ಹೆಣ್ಣುಗಳು ಒಂದೋ ವ್ಯಕ್ತಿಗತ ನೆಲೆಯಲ್ಲಿ ಒಂಟಿಯಾಗುತ್ತಾರೆ ಇಲ್ಲವೇ ವ್ಯವಸ್ಥೆಯಲ್ಲಿ ಕರಗಿ ಹೋಗಿ ನಿರ್ನಾಮವಾಗುತ್ತಾರೆ.

ಪುರುಷ ತಾತ್ವಿಕತೆಯ ಹಿನ್ನೆಲೆಯಲ್ಲಿ ಭಾಷೆಯೊಳಗೆ ಸೃಷ್ಟಿಯಾದ ಸ್ತ್ರೀಲಿಂಗಾಂಕಿತಗಳಾದ ಮಾತೆ, ಕುಟುಂಬಿನಿ, ಪತಿವ್ರತೆ, ಸಹಧರ್ಮಿಣಿ, ತ್ಯಾಗಮಯಿ, ಸಹನಾಶೀಲೆ ಮುಂತಾದ ಕಲ್ಪನೆಗಳನ್ನು ಸೃಜನಶೀಲ ನೆಲೆಯಲ್ಲಿ ಮೀರಲು ಸ್ತ್ರೀಯರಿಗೆ ಸಾಧ್ಯವಾದರೂ ಕೂಡ, ಪುರುಷ ಮೌಲ್ಯಗಳೆಂದೇ ಕರೆಯಬಹುದಾದ ಸ್ವಾತಂತ್ರ್ಯ ಸಮಾನತೆ, ಧೈರ್ಯ, ಏಕಾಂಗಿ ಬದುಕು ಸಾಮಾಜಿಕ ಸಂದರ್ಭದಲ್ಲಿ ಪುರುಷರಿಗೆ ಸಾಧ್ಯವಾದಂತೆ ಸ್ತ್ರೀಯರಿಗೆ ಇನ್ನೂ ಸಾಧ್ಯವಾಗಿಲ್ಲ ಎಂದು ಹೇಳಬಹುದು. ಸ್ವತಂತ್ರ ಪ್ರವೃತ್ತಿವುಳ್ಳ ಕುಟುಂಬದ ಚೌಕಟ್ಟಿನಿಂದ ಹೊರಬರುವ ಹೆಂಗಸರನ್ನು ಆಧುನಿಕ ಸಮಾಜವೂ ಕೂಡ ಸಂಭ್ರಮ ಮತ್ತು ಸಂವೇದನೆಗಳೆರಡರಿಂದಲೂ ನೋಡುತ್ತಿದೆ.

ವೀಣಾರವರು ತಮ್ಮ ಕೃತಿಗಳಲ್ಲಿ ಹೆಣ್ಣಿನದೇ ಅನುಭವಗಳನ್ನು ಕಲ್ಪನೆಗಳನ್ನು ಹೆಣ್ಣಿನದೇ ಭಾಷೆಯಲ್ಲಿ ನಿರೂಪಿಸಿದ್ದಾರೆ. ಹೆಣ್ಣಿಗೇ ವಿಶಿಷ್ಟವಾದ ಭಾಷೆಯನ್ನು ರೂಪಿಸಿ

ಸ್ತ್ರೀವಾಚಕಗಳ ಮುಖಾಂತರವೇ ಅಭಿವ್ಯಕ್ತಿ ನೀಡಲು ಪ್ರಯತ್ನಿಸಿದ್ದಾರೆ. ಇದನ್ನು ಒಂದು ಉದಾಹರಣೆಯ ಮೂಲಕ ಸ್ಪಷ್ಟ ಪಡಿಸಿಕೊಳ್ಳುವುದಾದರೆ,

ಆಕೆ ತಿರುಗಿ ನೋಡಿದಳು, ಕೂಗಿದಾಕೆ ಗೆಳತಿ ಶಶಿಕುಲಕರ್ಣಿ,
ಹೆಣ್ಣುಮಕ್ಕಳ ಟ್ರೇನಿಂಗ್ ಕಾಲೇಜಿನ **ಅಧ್ಯಾಪಕಿ** ಅವಳ ಜೊತೆ
ಇನ್ನೂ ಮೂವರು ಹೆಂಗಸರು, ಅವರೆಲ್ಲ ಬಿಳಿ ಖಾದಿ
ಉಟ್ಟಿದ್ದು ನೋಡಿದರೆ ಅವರು ಶಶಿ ಹೊಸದಾಗಿ ಸರು ಮಾಡಿದ
ಭಗಿನೀ ಸೇವಾ ಸದನದ **ಸದಸ್ಯೆ**ಯರಿರಬೇಕು ಅನಿಸಿತು ಆಕೆಗೆ[೨೮]

ಮೇಲಿನ ಉದಾಹರಣೆಯಲ್ಲಿ 'ಅಧ್ಯಾಪಕಿ', 'ಸದಸ್ಯೆ'ಯರು ಎಂಬ ಸ್ತ್ರೀವಾಚಕಗಳ ಕ್ರಮಬದ್ಧವಾದ ಬಳಕೆಯನ್ನು ಗುರುತಿಸಬಹುದು.

ಆದರೆ ಎಲ್ಲಾ ಸಂದರ್ಭಗಳಲ್ಲೂ ಈ ಸ್ತ್ರೀ ವಾಚಕಗಳ ಬಳಕೆ ಸಾಧ್ಯವಾಗಿಲ್ಲ ಎಂದು ಹೇಳಬಹುದು. ಇದನ್ನು ಒಂದು ಉದಾಹರಣೆಯ ಮುಖಾಂತರ ಸ್ಪಷ್ಟಪಡಿಸಿಕೊಳ್ಳುವುದಾದರೆ,

ಎಂಥ ಮಳ್ಳ, ಅಂಜುಬುರುಕ ಹುಡುಗಿಯರು ! ಇವರಿಗೆ
ಸದಾ ಒಬ್ಬರ ಆಸರೆ ಬೇಕು, ಸಹಾಯ ಬೇಕು, ಸ್ವತಃದ
ದುರ್ಬಲತೆಯಲ್ಲಿ ಅದನ್ನು ಜಗತ್ತಿನೆದುರಿಗೆ ಬಿಚ್ಚಿಡುವುದರಲ್ಲಿ
ಅದೆಂಥ ಮೂರ್ಖ ಆನಂದವೋ ಇವರಿಗೆ [೨೯]

ಮೇಲಿನ ಉದಾಹರಣೆಯಲ್ಲಿ ವೀಣಾರವರು ಹೆಣ್ಣುಗಳನ್ನು ಕುರಿತು ಮಾತನಾಡುವಾಗಲೂ ಕೂಡ 'ಮಳ್ಳ' , 'ಅಂಜುಬುರುಕ', 'ಮೂರ್ಖ' ಎಂಬಂತಹ ಪುರುಷ ವಾಚಕಗಳನ್ನೇ ಬಳಸಿದ್ದಾರೆ.

ಒಟ್ಟಾರೆ ಪುರುಷ ಪ್ರಧಾನ ಸಮಾಜದಲ್ಲಿ ಪುರುಷ ತಾತ್ವಿಕತೆ ಭಾಷೆಯನ್ನು ಒಳಗೊಂಡಂತೆ ನಮಗೆ ಅರಿವಿಲ್ಲದಂತೆ ನಮ್ಮನ್ನು ನಿಯಂತ್ರಿಸುತ್ತಿರುತ್ತವೆ. ವೀಣಾರವರ ಬರಹದಲ್ಲಿ, ಭಾಷೆಯೊಳಗಿನ ಸ್ಥಾಪಿತ ಅರ್ಥಗ್ರಹಿಕೆಯನ್ನು ವಿಸ್ತರಿಸಿಕೊಂಡು ಪುರುಷನಿಗೆಂದೇ ಮೀಸಲಾಗಿದ್ದ ಮೌಲ್ಯಗಳನ್ನು ಸ್ತ್ರೀಯರೂ ತಮ್ಮದಾಗಿಸಿಕೊಳ್ಳುವಿಕೆಯ ಪ್ರಯತ್ನ ನಡೆದಿರುವುದು ನಿಜಕ್ಕೂ ಶ್ಲಾಘನೀಯ.

**ಹೆಣ್ಣಿನಭಾಷೆ ಮಾತಿನಿಂದ ಮೌನದೆಡೆಗೆ**

ಕೇಟ್ ಮಿಲೇಟ್ ಎಂಬ ಪಾಶ್ಚಾತ್ಯ ಚಿಂತಕಿ 'ಸಾಹಿತ್ಯವನ್ನು ಪಿತೃ ಪ್ರಧಾನ ವ್ಯವಸ್ಥೆಯ ಸಮೂಹ ಪ್ರಜ್ಞೆಯ ದಾಖಲೆ' [೩೦] ಎಂದೇ ಭಾವಿಸಿ, ಅದರಲ್ಲಿನ ಪುರುಷರ ಮೌಲ್ಯಗಳೇ ಹೇಗೆ ಸಾರ್ವತ್ರಿಕ ಮೌಲ್ಯಗಳಾಗಿವೆ ಎಂದು ಗುರುತಿಸುತ್ತಾಳೆ. ನಮ್ಮ ಅನೇಕ ಪುರುಷ ಬರಹಗಳಲ್ಲಿ ಹೊಸತನದ ಅವಿಷ್ಕಾರಗಳೆಲ್ಲದಕ್ಕೂ ಪುರುಷರು ಪ್ರತಿನಿಧಿಗಳಾಗಿದ್ದರೆ ಹಳೆಯ ಸಾಂಸ್ಕೃತಿಕ ಮೌಲ್ಯಗಳ ಗಟ್ಟಿತನಕ್ಕೆ ಸ್ತ್ರೀಯರು ಪ್ರತೀಕಗಳಾಗಿರುವುದನ್ನು ಗುರುತಿಸಬಹುದು. ಅದು ಮೂಲಭೂತವಾಗಿ ಗಂಡುಗಳ ಲೋಕ ಅಲ್ಲಿ ವರ್ಣಿತವಾಗಿರುವುದು ಗಂಡಿನ ಜಗತ್ತು. ವ್ಯಕ್ತವಾಗಿರುವುದು ಗಂಡಿನ ಮನೋಧರ್ಮ.

''ಭಾಷೆಯಿಂದ ಮಾಧ್ಯಮೀಕರಣಕ್ಕೆ ಒಳಗಾದ, ಶುದ್ಧ ವಾಸ್ತವಿಕತೆಯನ್ನು ಸಾಹಿತ್ಯವೂ ಹೇಗೆ ಪ್ರತಿಬಿಂಬಿಸುತ್ತದೆ ಎನ್ನುವುದಕ್ಕಿಂತ ನಿರ್ದಿಷ್ಟ ಸಮಾಜಗಳಲ್ಲಿ ಕಟ್ಟಲ್ಪಟ್ಟ ಲಿಂಗಭೇದದ ಸಂಬಂಧಗಳು ಸಾಹಿತ್ಯದಲ್ಲಿ ಹೇಗೆ ಚಿತ್ರಿತವಾಗಿವೆ ಎನ್ನುವುದನ್ನು ಗಮನಿಸಬೇಕು.[೩೧] ಎಂಬ ತೇಜಸ್ವಿನಿ ನಿರಂಜನರವರ ವಾದ ಪ್ರಮುಖವಾದದು.

ಈ ಹಿನ್ನೆಲೆಯಲ್ಲಿ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಅಧಿಕಾರರೂಢನಾದ ಪುರುಷ ಹೆಣ್ಣಿಗೆ ಯಾವುದೇ ವಿಷಯದಲ್ಲಾಗಲೀ ಮುಕ್ತ ಅಭಿವ್ಯಕ್ತಿಗೆ ಅವಕಾಶ ನೀಡುವುದಿಲ್ಲ. ಅವಳವಿಚಾರ, ಅವಳ ಮಾತನ್ನು ಒಂದೋ ನಿರ್ಲಕ್ಷಿಸುತ್ತಾನೆ, ಕೀಳೈಸುತ್ತಾನೆ ಇಲ್ಲವೇ ಅವನಿಗೆ ವಿಧೇಯವಾಗಿ ಮಾಡಿಕೊಳ್ಳುತ್ತಾನೆ. ಆಗ ಹೆಣ್ಣಿನ ಭಾಷೆ ಮಾತಿನಿಂದ ಮೌನದೆಡೆಗೆ ಚಲಿಸುತ್ತದೆ.

ಈ ವಿಷಯವನ್ನು ಕುರಿತ ಸ್ಪಷ್ಟೀಕರಣಕ್ಕಾಗಿ ಪುರುಷ ತಾತ್ವಿಕತೆಯನ್ನೇ ಪ್ರಧಾನವಾಗಿ ಹೊಂದಿರುವ ಅನಂತಮೂರ್ತಿಯವರ 'ಸಂಸ್ಕಾರ' ಮತ್ತು 'ಭಾರತೀಪುರ' ಎಂಬ ಎರಡು ಕಾದಂಬರಿಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಳ್ಳಲಾಗಿದೆ.

ಸಂಸಾರದಲ್ಲಿ ನಾರಾಯಣಪ್ಪನ ಶವ ಸಂಸ್ಕಾರದ ಸಂದರ್ಭದಲ್ಲಿ ಬಂಗಾರದ ಪ್ರಶ್ನೆ ಎದುರಾದಾಗ ಲಕ್ಷ್ಮಣಾಚಾರ್ಯರ ಹೆಂಡತಿ ಅನಸೂಯ ತನ್ನ ತಂಗಿಯ ಮೈ ಮೇಲೆ ಇರಬೇಕಾಗಿದ್ದ ಆಭರಣಗಳೆಲ್ಲ ಕೈತಪ್ಪಿಹೋಗುವುದಲ್ಲಾ ಎಂದು,

ಯಾರ ಆಸ್ತಿಯೆಂದು ಅವಳು ಈ ಬಂಗಾರಾನ್ನ ಪರಭಾರೆ
ಮಾಡ್ತಾಳಂತೆ? ಎಲ್ಲ ನೆಟ್ಟಗಿದ್ದರೆ ತನ್ನತಂಗಿಯ
ಕೊರಳಲ್ಲಿರಬೇಕಾಗಿತ್ತು ಅದು ಎಂದು ಬಿಕ್ಕಿದಳು.
ಹೆಂಡತಿಯ ಮಾತು ಲಕ್ಷ್ಮಣಾಚಾರ್ಯನಿಗೆ ಸರಿಯೆನಿಸಿದರೂ ತನ್ನ
ಪತಿತ್ವಕ್ಕೆ ಚ್ಯುತಿಯಾಗದಿರಲೆಂದು,

'ಗಂಡಸರ ಕಾರುಭಾರಿನಲ್ಲಿ ನಿನ್ನದೇನು ಹರಟೆ? ಸುಮ್ಮನಿರು'
ಎಂದು ಗದರಿಸಿದನು. [೩೨]

ಇಲ್ಲಿ ಹೆಣ್ಣಿನ ಮಾತನ್ನು ತುಂಡರಿಸುವಿಕೆ ಅಥವಾ ಮೌನಗೊಳಿಸುವಿಕೆಯನ್ನು ಕಾಣಬಹುದು. ಅವಳ ಮಾತು ಒಪ್ಪಿತವಾದರೂ ಗಂಡು ತನ್ನ ಪತಿತ್ವಕ್ಕೆ ಚ್ಯುತಿ ಬರುತ್ತದೆಂಬ ಕಾರಣದಿಂದ ಅವಳ ಮಾತನ್ನು ನಿರ್ಲಕ್ಷಿಸುತ್ತಾನೆ. ಆಗ ಹೆಣ್ಣಿನ ಭಾಷೆ ಮೌನದೆಡೆಗೆ ಸಾಗುತ್ತದೆ. ಪುರುಷ ಪ್ರಧಾನ ತಾತ್ವಿಕತೆ ಎಂದಿಗೂ ಹೆಣ್ಣಿನ ವಿಚಾರಗಳಿಗೆ ಬೆಲೆ ಕೊಡುವುದಿಲ್ಲ. ಅವಳ ವಿಚಾರಗಳು ಮೌಲ್ಯಯುತವಾಗಿದ್ದರೂ ಕೂಡ ಪುರುಷರು ತನ್ನ ಅಧಿಕಾರತ್ವಕ್ಕೆ ಎಲ್ಲಿ ಚ್ಯುತಿ ಬರುತ್ತದೆಂಬ ಒಂದೇ ಒಂದು ಕಾರಣದಿಂದ ಹೆಣ್ಣಿನ ಮಾತನ್ನು, ಅವಳ ನಿಲುವನ್ನು, ಅವಳ ಅಭಿಪ್ರಾಯಗಳನ್ನು ನಿರ್ಲಕ್ಷಿಸಿ ಸದಾ ಅವಳನ್ನು ಮೌನಗೊಳಿಸುವ ಪ್ರಯತ್ನದಲ್ಲಿ ನಿರತನಾಗಿರುತ್ತಾರೆ.

ಇಂಥದ್ದೆ ಇನ್ನೊಂದು ಪ್ರಸಂಗವನ್ನು ಗಮನಿಸುವುದಾದರೆ,

''ಶ್ರೀಪತಿ ಪಂಚೆಯುಟ್ಟು ಅಂಗಿತೊಟ್ಟು ಆಸೆಯಿಂದ ಬಾಚಣಿಗೆ
ತೆಗೆದು ಕ್ರಾಪು ಬಾಚಿ, ಬ್ಯಾಟರಿ ಹತ್ತಿಸಿ ನೋಡುತ್ತಾ ಅವಸರದಲ್ಲಿ
ಓಡಿಬಿಟ್ಟ. ಬೆಳ್ಳಿ ಮಲಗಲಿಕ್ಕೆ ಸರಿಯೇ ಹೊರ್ತು
ಮಾತಾಡಲಿಕ್ಕಲ್ಲ. ಬಾಯಿಬಿಟ್ಟರೆ ಅವಳದ್ದು ಗಣದೈಯ್ಯ.....''[೩೩]

ಇಲ್ಲಿ ಹೆಣ್ಣಿನ ಮಾತಿಗಿಂತ ಅವಳಿಂದ ದೊರೆಯುವ ದೈಹಿಕ ಸುಖಮಾತ್ರ ಪುರುಷನಿಗೆ ಮುಖ್ಯವಾಗುತ್ತದೆ. ಇಲ್ಲಿ ಕೂಡ ಹೆಣ್ಣಿನ ಮಾತು ಮೌನದ ಕಡೆಗೆ ಇಲ್ಲಿ ಹೆಣ್ಣಿನ ಅಭಿವ್ಯಕ್ತಿಯ ಅವಕಾಶವನ್ನು ಮೊಟಕುಗೊಳಿಸಲಾಗಿದೆ. ಅವಳ ಅಭಿವ್ಯಕ್ತಿಯನ್ನು ಮೊಟಕುಗೊಳಿಸುವ ಪ್ರಯತ್ನವೇ ಅವಳ ಭಾಷೆಯನ್ನು ಬೆಳೆಸಿಕೊಳ್ಳುವುದರ ನಿಯಂತ್ರಣದ ಮೊದಲ ಹಂತವೆನ್ನಬಹುದು.

ಪುರುಷ ಬರಹಗಳಲ್ಲಿ ಮಾತ್ರವಲ್ಲದೆ, ಪುರುಷ ತಾತ್ವಿಕತೆಯನ್ನು ಒಪ್ಪಿಕೊಂಡಿರುವ ಸ್ತ್ರೀ ಬರಹಗಳಲ್ಲೂ ಕೂಡ ಹೆಣ್ಣಿನ ಭಾಷೆ ಮಾತಿನಿಂದ ಮೌನದೆಡೆಗೆ ಚಲಿಸುತ್ತದೆ ಎಂಬುದನ್ನು ಮರೆಯುವಂತಿಲ್ಲ. ಇದನ್ನು ಒಂದು ಉದಾಹರಣೆಯ ಮೂಲಕ ಸ್ಪಷ್ಟಪಡಿಸಿಕೊಳ್ಳುವುದಾದರೆ,

> ಹೆಂಗಸು ಇಷ್ಟೊಂದು ಮಾತಾಡೋದು ಒಳ್ಳೆಯದಲ್ಲ ನಿಜ ರಮೇಶನ ಮಾತು ನಿಜ ತಾನು ಈಚೆಗೆ ಮಾತನಾಡುವುದು ಬಹಳ ಜಾಸ್ತಿಯಾಗಿದೆ. ಹಳ್ಳಿಯಿಂದ ಬಂದ ಹುಡುಗಿ ತಾನು ಅಷ್ಟೇನು ವಿದ್ಯೆಯಿಲ್ಲದವಳು. ತಾನೂ ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿರುವ ರಮೇಶನೊಡನೆ ಅಷ್ಟೊಂದು ಮಾತಿಗೆ ಹೋಗುವುದು ತಪ್ಪು. ಇಲ್ಲಿಗಾಯಿತು ದೇವರೇ ಇನ್ನು ಮೇಲೆ ರಮೇಶನೊಡನೆ ಹೆಚ್ಚಿಗೆ ಮಾತನಾಡಲು ಆಗುವುದಿಲ್ಲ ಎಂದ ಶಾಂತ ನಿಶ್ಚಯಿಸಿದಳು.[೩೪]

ಮೇಲಿನ ತ್ರಿವೇಣಿಯವರ 'ತಾವರೆಯಕೊಳ'ದ ಶಾಂತಿ ತಾನು ಅವಿದ್ಯಾವಂತಳು, ಪುರುಷನೊಂದಿಗೆ ಸರಿಸಮನವಾಗಿ ಮಾತನಾಡಬಾರದು ಎಂದು ಪುರುಷ ಮೌಲ್ಯಗಳನ್ನು ಅಂಗೀಕರಿಸಿಕೊಂಡು ಮಾತಿನಿಂದ ಮೌನದೆಡಗೆ ಸಾಗುತ್ತಾಳೆ. ಗಂಡಿಗೆ ನೋವಾಗದಂತೆ ಭಾಷೆ ಬಳಸುತ್ತಾಳೆ. ದುಃಖಿಸುವ ಮುಖಾಂತರ ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಾಳೆ.

ಪುರುಷ ತಾತ್ವಿಕತೆಯನ್ನು ವಿರೋಧಿಸುವ ಬರಹಗಳು ಮಾತ್ರ ಗಂಡು ಹೆಣ್ಣನ್ನು ಮೌನಗೊಳಿಸುವಿಕೆಯ ವಿಚಾರದ ವಿರುದ್ಧ ಪ್ರತಿಭಟಿಸಿ ರಾಜಾರೋಷವಾಗಿ ಮಾತನಾಡುತ್ತಾಳೆ. ಇದನ್ನು ಒಂದು ಉದಾಹರಣೆಯ ಮುಖಾಂತರ ಸ್ಪಷ್ಟಪಡಿಸಿ ಕೊಳ್ಳುವುದಾದರೆ,

> ''ಯೂ ಶಟಪ್' ಅಂತ ಜಾನ್ ಗುಡುಗಿದಾಗ ಶಾಂತಿಗೆ ತಡೆಯಲಾಗಲಿಲ್ಲ. ಆಕೆ ಮುಂದೆ ಬಂದು ನೇರವಾಗಿ ಆತನನ್ನೇ ನೋಡುತ್ತ ಕೇಳಿದಳು.

ನಾ ಹೋದರ ಏನಾತು ಒಂದಿನಾ ? ಎಲ್ಲಾರೂ
ಹೋಗೋದಿಲ್ಲೇನು ?
ನಾನು ಪಾರ್ಟಿಯಮೆಂಬರ್ ಅಲ್ಲೇನು?.... ಆಕೆ ವ್ಯಗ್ರಳಾಗಿ
ಆತನ ಕಡೆ ತಿರುಗಿ ನೋಡಿದಳು. ಜಾನ್ ಆಕೆಗೆ ತೀರ
ಹೊಸಬನಾಗಿ ಕಾಣಿಸಿದ.[೩೫]

ವೀಣಾರವರ 'ಗಂಡಸರು'ಕಾದಂಬರಿಯ ನಾಯಕಿ ಶಾಂತಿ ಸದಾ ವೈಚಾರಿಕ ಎಚ್ಚರದಿಂದಲೇ ಪುರುಷ ವರ್ಗವನ್ನು ನೋಡುವವಳಾದ್ದರಿಂದ ಪುರುಷನಿಂದ ನಿಯಂತ್ರಿತಳಾಗಿ ಮೌನವಹಿಸುವವಳಲ್ಲ. ಸಿಟ್ಟು ಆಕ್ರೋಶದೊಡನೆ ಮೌನವನ್ನು ಮುರಿದು ಮಾತಿನೆಡೆಗೆ ಸಾಗುತ್ತಾಳೆ. ಹೆಣ್ಣು ಸೌಮ್ಯಳು ಎಂಬ ಪಾರಂಪರಿಕ ಸ್ತ್ರೀ ಮೌಲ್ಯವನ್ನು ಭಾಷಿಕ ನೆಲೆಯಲ್ಲಿ ಮೀರಿ ವರ್ತಿಸುತ್ತಾಳೆ.

ಅತ್ಯಂತ ಸಂಪ್ರದಾಯ ಶೀಲ ಗಂಡಸಾದರೂ ವಿಕಾಸ ಅನಿವಾರ್ಯ ಎಂಬುದನ್ನು ಒಪ್ಪುತ್ತಾ, ಜೀವನದ ಸತ್ಯವನ್ನು ಅರಿಯಲು ಮುಖ್ಯ ಮಾನದಂಡವನ್ನಾಗಿ, ಈ ಕಾದಂಬರಿಗಳಲ್ಲಿ ಬಳಸಿದ್ದು ಲೈಂಗಿಕತೆಯನ್ನ. ಇಲ್ಲಿ ಗಂಡಸಿನ ಅರಿವನ್ನು ವಿಸ್ತರಿಸುವ ಅಥವಾ ಅವನನ್ನು ಪರಿಪೂರ್ಣವನ್ನಾಗಿಸುವ ಸಾಧನವಾಗಿ ಮಾತ್ರ ಹೆಣ್ಣು ಬಳಕೆಯಾಗುತ್ತಾಳೆ. ಪ್ರಾಣೇಶಾಚಾರ್ಯನಿಗೆ ಚಂದ್ರಿಯನ್ನು ಕೂಡಿದಾಗ ಅವನ ಜೀವನ ಪರಿಪೂರ್ಣವಾಗುತ್ತದೆ. ಅಂದರೆ ಚಂದ್ರಿ ಪ್ರಾಣೇಶಾಚಾರ್ಯರ ಅಪರಿಪೂರ್ಣತೆಯನ್ನು ತುಂಬುವ ಸಾಧನ ಮಾತ್ರ.

ಭಾರತೀಪುರದ ನಾಯಕ ಎಷ್ಟೇ ವಿಚಾರವಂತರಾಗಿದ್ದರೂ ಕೂಡ ಹೆಣ್ಣಿನಲ್ಲಿ ಅವನಿಗೆ ಕಾಣಿಸುತ್ತಿದ್ದದ್ದು ಅವಳ ಅಂಗಾಂಗಗಳು ಮಾತ್ರ. ಜಗನ್ನಾಥನಿಗೆ ನಾಗಮಣಿ, ಕಾವೇರಿಯಲ್ಲಿ ಕಾಣಿಸಿದ್ದು ಅವರ ಅಂಗಾಂಗಗಳು ಮಾತ್ರವೇ.

''ನಾಗಮಣಿ ಎರಡು ಬಾಳೆಲೆಗಳ ಚೂರನ್ನು ತನ್ನ ಮತ್ತು ಮಾವನ ಎದುರಿಗಿಡಲು ಬಗ್ಗಿದಳು. ತನ್ನೆದುರಿಗೆ ಬಗ್ಗಿದ ಪ್ರಾಯದ ಹುಡಗಿಯಲ್ಲಿ ಜಗನ್ನಾಥನ ಮನಸ್ಸುನೆಟ್ಟಿತು.ಆರೋಗ್ಯ ತುಳುಕುವ ಇಂತಹ ಹೆಣ್ಣೊಂದು ಈ ಮನೆಯಲ್ಲಿದೆ ಎಂದು ಊಹಿಸುವುದೇ ಕಷ್ಟ. ತುಂಬಿದ ಎದೆಯನ್ನುಮುಚ್ಚಿದ ಚೌಕುಳಿ ಬಟ್ಟೆಯ ರವಿಕೆ,

ಸಣ್ಣ ಸೊಂಟ, ಕಂದುಬಣ್ಣದ ಸಾದಾ ಸೀರೆಯಲ್ಲಿ ಕೊರೆದು ತೆಗೆದಿಟ್ಟಂತಹ ಆಕೃತಿ. ಎಣ್ಣೆಗೆಂಪುಬಣ್ಣ, ಮಧ್ಯ ಬೈತಲೆ ತೆಗೆದು ಕೂದಲನ್ನು ಗಟ್ಟಿಯಾಗಿ ಬಿಗಿದುಜಡೆ ಹಾಕಿದ್ದಳು. ಹಣೆಯಮೇಲೆ ಉದ್ದನೆಯ ಕುಂಕುಮ ತಾಳಿಯೊಂದು ಬಿಟ್ಟರೆ ಅವಳಮೈಮೇಲೆ ಇನ್ನೇನೂ ಆಭರಣವಿರಲಿಲ್ಲ. ಎಲೆಯ ಮೇಲೆ ಚಕ್ಕುಲಿ ಬಡಿಸಿ ಅವಳು ಮೇಲೇಳುವಾಗ ಬ್ರಾಸಿಯರ್ಸ್ ತೊಡದ ಅವಳ ಮೊಲೆಗಳು ರವಿಕೆಯಲ್ಲಿ ಉಬ್ಬಿ ಅಲ್ಲಾಡಿದವು....[೩೯]

ಜಗನ್ನಾಥ ಆಧುನಿಕತೆ ಮತ್ತು ಪರಂಪರೆಯ ವಿಚಾರಗಳನ್ನು ವಿಮರ್ಶಿಸಿ, ಪರಂಪರೆಯ ವಿಚಾರಗಳನ್ನು ಆಧುನಿಕ ವಿಚಾರಗಳೊಂದಿಗೆ ಸಂಘರ್ಷಿಸಿ ಜಾತಿ, ಮೌಢ್ಯ ದೇವರು, ವರ್ಗಗಳಲ್ಲಿನ ಕಲ್ಪನೆಗಳಲ್ಲಿ ವೈಚಾರಿಕ ದೃಷ್ಟಿಕೋನ ಹೊಂದಿದ್ದರೂ ಕೂಡ ಲಿಂಗತಾರತಮ್ಯದ ವಿಚಾರವಾಗಿ ಯಾವುದೇ ವೈಚಾರಿಕ ದೃಷ್ಟಿಕೋನವನ್ನು ಹೊಂದಲು ಅವನಿಗೆ ಸಾಧ್ಯವಾಗಿಲ್ಲ. ಅಲ್ಲದೆ ಹೆಣ್ಣಿನ ಕೂಡುವಿಕೆಯ ವಿಚಾರ ಬಂದಾಗ ಅಲ್ಲಿ ಅವನು ತನ್ನ ವರ್ಗದ ಕಲ್ಪನೆಯನ್ನು ಮೀರಿ ವರ್ತಿಸಲು ಸಾಧ್ಯವಾಗುವುದಿಲ್ಲ.

> ''ಜಗನ್ನಾಥನಿಗೆ ಅವಳ ಬಗ್ಗೆ ಆಸೆಯಾಯಿತು. ಆದರೆ ತನ್ನ ವರ್ಗದವಳೊಬ್ಬಳ ಬಗ್ಗೆ ಆಸೆಯಾಗಿದ್ದರೆ ಹೇಗೆ ವರ್ತಿಸಬೇಕೆಂದು ಗೊತ್ತಿದ್ದಂತೆ ಈಗ ತಿಳಿದಿರಲಿಲ್ಲ. ಅವಳ ಜೊತೆ ಕ್ಷಣಿಕವಾದ ಮೈಸಂಬಂಧಕ್ಕಿಂತ ಆಚಿನದೇನೂ ಸಾಧ್ಯವಿರಲಿಲ್ಲ. ಆದರೆ ಕಾಮಕ್ಕೆ ಉಪಯೋಗಿಸುವ ಬರಿಯೊಂದು ವಸ್ತುವಿಗಿಂತ ಹೆಚ್ಚಿನ ವಾಸ್ತವತೆ ನಮ್ಮ ನಡುವೆ ಹುಟ್ಟಲಾರದು. ತಾನು ಕಾವೇರಿಯನ್ನು ಕೂಡಿದರೆ ಅದು ಮಾನವೀಯ ಸಂಬಂಧವಾಗಲಾರದು. ಇಷ್ಟೊಂದು ಆಸೆ ಹುಟ್ಟಿಸಬಲ್ಲ ಮೈ ಹೇಗೆ ತನಗೆ ನಿಜವಾಗಿಯೂ ಅತೀತವಾದ್ದೆಂಬುದು ವರ್ಗಭೇದದ ದುರಂತವನ್ನು ಅವನಿಗೆ ಮನದಟ್ಟು ಮಾಡಿಸಿತು. ಆದರೂ ಅವಳು ರೂಮಿಗೆ ಕಸಗುಡಿಸಲು ಬಂದಾಗಲೆಲ್ಲ ಮೈ ಬೆಚ್ಚಾಗಿ ಹೆದರಿಕೆಯಾಗುತ್ತಿತ್ತು.[೩೭]

ಸಾಮಾಜಿಕ ಸಂದರ್ಭದಲ್ಲಿ ಜಾತಿ, ಮತ, ವರ್ಗ, ಮೌಢ್ಯಗಳ ಕಲ್ಪನೆಯನ್ನು ವೈಚಾರಿಕತೆಯಿಂದ ನೋಡುವ ಜಗನ್ನಾಥನಿಗೆ ಕಾವೇರಿಯ ವಿಷಯದಲ್ಲಿ ಮೀರುವಿಕೆ

ಸಾಧ್ಯವಾಗಲಿಲ್ಲ. ಹೆಣ್ಣಿನ ವಿಚಾರ ಬಂದಾಗ ಪುರುಷ ಚಿಂತನೆ ಸಾಂಪ್ರದಾಯಿಕವಾಗುತ್ತಲೇ ಹೋಗುತ್ತದೆ. ಅಲ್ಲದೆ ಅವನ ಇಡೀ ಆಸಕ್ತಿ ಇರುವುದು. ಪಾರಂಪರಿಕ ಶ್ರದ್ಧೆಯ ವ್ಯವಸ್ಥೆಯಿಂದ ಗಂಡಿನ ಬಿಡುಗಡೆ ಮಾತ್ರ.

ಜಗನ್ನಾಥನಿಗೆ ಪಾರಂಪರಿಕ ಅಂಧಶ್ರದ್ಧೆಯಲ್ಲಿ ಹೆಣ್ಣಿನ ಬಾಳು ಮುಳುಗುತ್ತಿರುವ ಸ್ಥಿತಿಯ ಬಗ್ಗೆ ಅವನ ಪ್ರಜ್ಞೆ ಹರಿದರೂ ಕೂಡ ಅದಕ್ಕೆ ಪರಿಹಾರ ಕಂಡುಕೊಳ್ಳುವಲ್ಲಿಗೆ ಹೋಗಿ ಮುಟ್ಟುವುದಿಲ್ಲ. ಹೆಣ್ಣಿನ ವಿಚಾರದಲ್ಲಿ ಅವನ ಅರಿವಿಗೂ ಇರಿವಿಗೂ ಬಿರುಕಿರೋದು ಕಾದಂಬರಿಯಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

ಕಾದಂಬರಿಯಲ್ಲಿ ಬ ರುವ ಮಾರ್ಗರೇಟ್‌ಳ ಪಾತ್ರ ಆಧುನಿಕ ಸ್ವತಂತ್ರ ವ್ಯಕ್ತಿತ್ವವುಳ್ಳ ಸ್ತ್ರೀಪಾತ್ರದಂತೆ ಸೃಷ್ಟಿಯಾಗಿದ್ದರೂ ಕೂಡ, ಪುರುಷರ ದೃಷ್ಟಿಕೋನದಿಂದ ನೋಡಿದಾಗ ಅವಳಿಗೂ ಸಂಪೂರ್ಣ ಸ್ವಾತಂತ್ರ್ಯ ದೊರೆತಿಲ್ಲ.

> ಮಾರ್ಗರೇಟ್ ಬೇರೆಯಾಗುವ ಸ್ವಾತಂತ್ರ್ಯವಿರಬೇಕು. ಇದ್ದು ತನ್ನ ವಸ್ತುವಾಗಿರಬೇಕು. ಹಾಗೆ ತನ್ನ ವಸ್ತುವಾಗಿದ್ದಾಗಲೂ ಸ್ವತಂತ್ರವಾಗಿ ಉಳಿದಿರಬೇಕು. ಇದು ನನ್ನ ಬಯಕೆ ಅವಳು ತನ್ನ ವಸ್ತುವಾಗಿ ದಕ್ಕದೆ ಪ್ರೀತಿ ಸಫಲವಾಗಲ್ಲ. ಆದರೆ ತನ್ನಿಂದ ಪ್ರತ್ಯೇಕಳು ಅನ್ನಿಸದೆ ಪ್ರೀತಿ ಉಳಿಯಲ್ಲ. ತದ್ವಿರುದ್ಧ. ಆದರೆ ನಿಜ ಅದಕ್ಕೆ ಪ್ರೀತಿಸುವುದೆಂದರೆ ಯಾತನೆ.[೩೮]

ಹೆಣ್ಣಿಗೆ ಸ್ವಾತಂತ್ರ್ಯವಿರಬೇಕು ಎಂಬ ಕಲ್ಪನೆಯ ಹಿಂದೆಯೇ ಆಕೆ ತನ್ನ ವಸ್ತುವಾಗಿರಬೇಕು. ವಸ್ತುವಾಗಿದ್ದುಕೊಂಡೆ ಸ್ವತಂತ್ರವಾಗಿರಬೇಕು ಎಂಬ ನಿಲುವು ನಾಯಕನದು. ಅಂದರೆ ಹೆಣ್ಣಿನ ಸ್ವಾತಂತ್ರ್ಯ ಗಂಡಿನ ಅಂಗೈಮುಷ್ಠಿಯಳತೆಯಲ್ಲಿ ಮಾತ್ರ.

ಸ್ತ್ರೀಯರಿಗೆ ಪ್ರತ್ಯೇಕ ಅಸ್ಥಿತ್ವವಿಲ್ಲದ ಈ ರಚನೆಗಳಲ್ಲಿ ಯಥಾಪ್ರಕಾರ ಸಮುದಾಯ ವಾಚಕ ಪದಗಳೂ ಕೂಡ ಪುರುಷ ಅಸ್ಥಿತ್ವವನ್ನೇ ಒಳಗೊಂಡಿವೆ.

> ''ಪಾರಿಜಾತಪುರದವರು ಒಟ್ಟಿನಲ್ಲಿ ಸುಖಿಗಳು; ನೇಮನಿಷ್ಠೆಯೆಂದು ಕುಣಿಯುವವರಲ್ಲ; ಅಡಿಕೆ ತೋಟ ಮಾಡುವುದರಲ್ಲಿ ನಿಸ್ಸೀಮರು. ಶ್ರೀಮಂತರು[೩೯]

ಪಾರಿಜಾತಪುರದಲ್ಲಿ ಕೇವಲ ಗಂಡಸರು ಮಾತ್ರ ನೆಲೆಸಿಲ್ಲ. ಅಲ್ಲಿ ಹೆಂಗಸರೂ ಇದ್ದಾರೆ. ಆದರೆ ಒಟ್ಟಾರೆ ಸಮುದಾಯ ವಾಚಕವಾಗಿ ಪುರುಷರನ್ನು ಮಾತ್ರ ಗಮನದಲ್ಲಿಟ್ಟುಕೊಂಡೇ ಇಲ್ಲಿನ ಭಾಷೆ ರಚಿತವಾಗಿದೆ. ಅಡಿಕೆತೋಟ ಮಾಡುವಲ್ಲಿ ಗಂಡಿನಷ್ಟೇ ಸಮಾನಪಾತ್ರ ಹೆಣ್ಣಿನದಾಗಿದ್ದರೂ ಕೂಡ ನಿಸ್ಸೀಮರು ಕಾಣುತ್ತಾರೆಯೇ ಹೊರತು ನಿಸ್ಸೀಮೆಯರು, ಶ್ರೀಮಂತೆಯರು ಕಾಣುವುದಿಲ್ಲ.

ಭಾರತೀಪುರದ ಚಿಕ್ಕಿಯ ಪಾತ್ರವಂತು ಮೊದಲಿನಿಂದ ಕೊನೆಯವರೆಗೂ ಮೌನವನ್ನೇ ತಾಳುತ್ತಾಳೆ. ಅವಳ ವಿಚಾರ ಪ್ರಗತಿಪರವಾಗಿರಲಿ ಅಥವಾ ಇಲ್ಲದಿರಲಿ ಒಟ್ಟಿನಲ್ಲಿ ಅವಳಿಗೆ ಅಭಿವ್ಯಕ್ತಿಗೆ ಮುಕ್ತ ಅವಕಾಶವಿಲ್ಲ. ಅವಳು ಮೌನಳು. ಒಟ್ಟಾರೆ ಈ ಎರಡು ಕಾದಂಬರಿಗಳಲ್ಲಿ ಎಲ್ಲಿಯೂ ಹೆಣ್ಣಿನ ಮಾತಿಗಾಗಲಿ ಅವಳ ವಿಚಾರಗಳಿಗಾಗಲೀ ಪುರುಷ ಸಮುದಾಯ ಬೆಲೆಕೊಟ್ಟಿಲ್ಲ. ಆ ದ್ದರಿಂದ ಅವಳ ಭಾಷೆ ಮಾತಿನಿಂದ ಮೌನದೆಡೆಗೆ ಸಾಗಿದೆ ಎಂದು ಹೇಳಬಹುದು.

**ಭಾಷೆಯ ಸ್ಥಾಪಿತ ಅಥವಾ ರೂಢಿಗತ ರಚನೆ, ಬಳಕೆಗಳನ್ನು ಮೀರುವಿಕೆ**

ಭಾಷೆ ಒಂದು ವ್ಯವಸ್ಥೆ. ಯಾವುದೇ ಒಂದು ವ್ಯವಸ್ಥೆಯಾದರೂ ರೂಪುಗೊಳ್ಳುವುದು ಪೂರ್ವನಿಶ್ಚಿತ ನಿಯಮಗಳ ಮೂಲಕವೇ. ಅದೇ ರೀತಿ ಭಾಷೆಯೊಳಗೂ ಕೂಡ ಅನೇಕ ಪೂರ್ವ ರೂಢಿಗತ ನಿಯಮಗಳಿವೆ. ಜಗತ್ತಿನಲ್ಲಿರುವ ಪ್ರತಿಯೊಂದು ಭಾಷೆಯ ಸ್ವರೂಪ ಕೂಡ ಪುರುಷ ಸ್ಥಾನೀಯವಾದದ್ದು ಎಂಬ ಸತ್ಯ ಎಲ್ಲರಿಗೂ ತಿಳಿದ ಹಾಗೂ ಒಪ್ಪಿತ ಸಂಗತಿ. ಅನಂತರ ಕಾಲದಲ್ಲಿ ಮಹಿಳೆಯರು ಇದನ್ನು ಪ್ರತಿಭಟಿಸುತ್ತಾ ತಮ್ಮ ಅಸ್ಥಿತ್ವದ ಕುರುಹಾಗಿ ತಮ್ಮ ಭಾಷೆಯನ್ನು ಪುರುಷ ಭಾಷೆಯ ಮುಖಾಂತರವಾಗಿಯೇ ಬದಲಿಸಿಕೊಂಡು ರೂಪಿಸಿಕೊಂಡರು.

ಈಗ ನಮ್ಮ ಮುಂದಿರುವ ಪ್ರಶ್ನೆ ಎಂದರೆ ಭಾಷೆಯೊಳಗಿನ ಈ ಪುರುಷತ್ವ ಅಥವಾ ಸ್ತ್ರೀತ್ವದ ನೆಲೆಯನ್ನು ಮೀರುವಿಕೆ ಸಾಧ್ಯವಾಗುತ್ತದೆಯೇ ?ಎಂಬುದು ಆಡುಮಾತಿನ ನೆಲೆಗಿಂತ ಸೃಜನಶೀಲ ನೆಲೆಯಲ್ಲಿ ಈ ಭಾಷೆಯೊಳಗಿನ ಸ್ಥಾಪಿತ ಅರ್ಥಗ್ರಹಿಕೆಯ ಮೀರುವಿಕೆ ಸಾಧ್ಯವಾಗುತ್ತದೆಂದು ಹೇಳಬಹುದು. ಏಕೆಂದರೆ ಅರ್ಥವ್ಯಾಪ್ತಿಯ ದೃಷ್ಟಿಯಿಂದ ಸಾಹಿತ್ಯದ ಭಾಷೆ ಅನೇಕ ಸ್ತರಗಳಲ್ಲಿ ಕೆಲಸಮಾಡುತ್ತದೆ.

ಸಾಹಿತ್ಯದ ಭಾಷೆ ಬೇಂದ್ರೆಯವರ ಹಕ್ಕಿಯಂತೆ ಗಾವುದ ಗಾವುದ ಗಾವುದ....ಮುಂದೆ ಹಾರುವ ಆಕಾಂಕ್ಷೆಯುಳ್ಳದ್ದು ಸಮಯವನ್ನೇ ಮೆಟ್ಟಿನಿಲ್ಲುವ ಶಕ್ತಿಯುಳ್ಳದ್ದು.

ಇದರೊಂದಿಗಿನ ಮತ್ತೊಂದು ಬಹಳಮುಖ್ಯವಾದ ಪ್ರಶ್ನೆ ಎಂದರೆ ಸಾಂಸ್ಕೃತಿಕ ಬಂಧನಗಳ ಮಿತಿಗಳನ್ನು ಮೀರುವ ಹಾಗೂ ಮಾನವರ ಸಮಗ್ರತೆಯ ಪರಿಕಲ್ಪನೆಗೆ ಪೂರಕವಾಗಿ ಭಾಷೆಯೊಳಗಿನ ಪೂರ್ವನಿಶ್ಚಿತ ನಿಯಮಗಳ ಮೀರುವಿಕೆ ಸೃಜನಶೀಲ ನೆಲೆಯಲ್ಲಿ ಪುರುಷ ಬರಹಗಾರರಿಗೆ ಸಾಧ್ಯವಾಗಿದೆಯೇ ? ಅಥವಾ ಮಹಿಳಾ ಬರಹಗಾರ್ತಿಯರಿಗೆ ಸಾಧ್ಯವಾಗಿದೆಯೇ ? ಎಂಬುದು.

ಭಾಷಿಕ ನೆಲೆಯಲ್ಲಿ ಗಂಡು-ಹೆಣ್ಣು ಎಂಬ ಎರಡೂ ಗುಂಪಿಗಿಂತ ಭಿನ್ನವಾದ ರೀತಿಯಲ್ಲಿ ಸ್ತ್ರೀತ್ವ-ಪುರುಷತ್ವಗಳೆರಡರ ಒಳಗೂ ಪ್ರವೇಶ ಮಾಡಬಲ್ಲಂಥ ಸಮಗ್ರ ದೃಷ್ಟಿಯಿಂದ ಅನುಭವವನ್ನು ಗುರುತಿಸುವ ಪ್ರಯತ್ನ ನಮ್ಮ ಸಂದರ್ಭದಲ್ಲಿ ಪುರುಷ ಲೇಖಕರಿಗೆ ಸಾಧ್ಯವಾದಷ್ಟು ಮಹಿಳಾ ಲೇಖಕಿಯರಿಗೆ ಸಾಧ್ಯವಾಗಿಲ್ಲವೆಂದು ಹೇಳಬಹುದು. ಅದರಲ್ಲೂ ಕುವೆಂಪು, ಬೇಂದ್ರೆ, ಅಡಿಗ, ಮಧುರಚೆನ್ನರಂತಹ ಕೆಲವು ಮಹಾನ್‌ಪ್ರತಿಭೆಗಳಿಗೆ ಮಾತ್ರ ಸಾಧ್ಯವಾಗಿದೆ. ಭಾಷೆಯೊಳಗಿನ ಹೊಸತನದ ಆವಿಷ್ಕಾರಕ್ಕೆ ಇವರುಗಳು ಪ್ರತಿನಿಧಿಗಳಾಗಿದ್ದಾರೆ.

ಮಹಿಳೆ ಪೂರ್ಣವಾಗಿ ಲಿಂಗವ್ಯವಸ್ಥೆಯಾಧಾರಿತ ಅನುಭವಗಳನ್ನು ಮೀರಿ ಸ್ವತಂತ್ರವಾಗಿ ಬರೆಯುವುದು ಕಷ್ಟ ಎನ್ನುವುದು ಅರಿವಿಗೆ ಬಂದಂತಹ ವಿಷಯವಾಗಿದೆ. ಸದಾ ತನ್ನ ದೇಹದ ಮೂಲಕವೇ ಗುರುತಿಸಿಕೊಡಲ್ಪಡುವ ಮಹಿಳೆಗೆ ತನ್ನ ದೇಹದ ಮೂಲಕವೇ ಅಸ್ಥಿತ್ವ ಪಡೆಯಬೇಕಾಗಿರುವುದರಿಂದ ದೇಹವನ್ನು ಮೀರಿ ಹೊಸತತ್ವ ಸೃಷ್ಟಿಸಲು ಇನ್ನು ಸಾಧ್ಯವಾಗಿಲ್ಲ ಎಂದು ಹೇಳಬಹುದು.

ಸಾಂಧ್ರಾಗಿಲ್ಬರ್ಟ್ ಎಂಬ ಪಾಶ್ಚಾತ್ಯ ಚಿಂತಕಿ '' ಮಹಿಳೆಯ ಸಾಹಿತ್ಯಿಕ ಸಾಮರ್ಥ್ಯ ಅಥವಾ ಸೃಜನಶಕ್ತಿಯು ಹೇಗೆ ತಾನೇ ಲೈಂಗಿಕತೆ ರೂಪಿಸಿದ ಅಸ್ಥಿತ್ವದಿಂದ ಭಿನ್ನವಾಗಲು ಸಾಧ್ಯ ? ಲೆಸ್ಬಿಯನ್ ಆಗಿ, ಕಪ್ಪು ಸ್ತ್ರೀಯಾಗಿ, ದುಡಿಯುವ ವರ್ಗದ ಹೆಣ್ಣಾಗಿ ಮಹಿಳೆ ತನ್ನನ್ನು ಗುರುತಿಸಿಕೊಳ್ಳುವಲ್ಲಿ ಲಿಂಗ ವ್ಯವಸ್ಥೆಯಾಧಾರಿತ ಸಿದ್ಧ ಮಾದರಿಗಳಿಂದ ಉದ್ದೇಶ

ಪೂರ್ವಕವಾಗಿ ಹೇಗೆ ತಾನೇ ಭಿನ್ನವಾಗಿ ಉಳಿಯಲು ಸಾಧ್ಯ.[೪೦] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾಳೆ.

ಅದೇ ರೀತಿ ನಮ್ಮ ಭಾರತೀಯ ಸಂದರ್ಭದಲ್ಲೂ ಕೂಡ ಪತಿವ್ರತೆ, ಕುಟುಂಬಿನಿ ಸಹಧರ್ಮಿಣಿ, ಮಾತೆ, ಸೀತೆ, ಸಾವಿತ್ರಿ, ಮಂಡೋದರಿ ಮೊದಲಾದ ಸಾಂಸ್ಕೃತಿಕ ಸ್ತ್ರೀತ್ವದ ಕಲ್ಪನೆಗಳ ಮುಖಾಂತರವೇ ಸ್ತ್ರೀ ತನ್ನ ಅಸ್ಥಿತ್ವವನ್ನು ಗುರುತಿಸಿಕೊಳ್ಳುತ್ತಾಳೆ. ಉದಾಹರಣೆಗೆ ಭಾಗ್ಯಜಯಸುದರ್ಶನ ಅವರ 'ಬಳುವಳಿ' ಕವನವನ್ನು ಗಮನಿಸುವುದಾದರೆ,

'ಅಹಲ್ಯಾ
ಗಂಡನೆಂದು ಕೂಡಿದ್ದಕ್ಕೆ
ತಪ್ಪಿಲ್ಲದ ತಪ್ಪಿಗೆ
ನೀನು ಬಾಧಸ್ಥಳಾಗಿ
ಕಲ್ಲಾಗುವ ಮುಂಚೆಯೇ
ಯಾಕೆ ಕೊಡವಿ ಬರಲಿಲ್ಲ
ನಿಮ್ಮ ಇತಿಹಾಸವನ್ನೇ ತಿರುವಿ
ಹಾಕಲಿಲ್ಲವೇಕೆ ?
ನೀವು ಮಾಡಿದವುಗಳೆಲ್ಲ
ಉಸಿರಾಡಿವೆ ಇಲ್ಲಿ
ಹಸಿರಾಗಿವೆ
ಬೇರಾಗಿವೆ ಈ ನೆಲದಲ್ಲಿ
ಶಾಪವಾಗಿವೆ ಸ್ತ್ರೀ ಕುಲಕೆ' [೪೧]

ಇಲ್ಲಿ ಆಧುನಿಕ ಮಹಿಳೆ ಪ್ರಾಚೀನ ಸ್ತ್ರೀ ಪ್ರತೀಕಗಳ ಮುಖಾಂತರವೇ ತನ್ನ ಸ್ಥಿತಿಯ ಬಗ್ಗೆ ಅನುತಾಪ ವ್ಯಕ್ತಪಡಿಸುತ್ತಾಳೆ. ಅಥವಾ ಈ ಎಲ್ಲಾ ಪಾತ್ರಗಳ ನಿರಾಕರಣೆಯ ಮೂಲಕ ಅದಕ್ಕೆ ತದ್ವಿರುದ್ಧವಾದ ಸ್ವತಂತ್ರ ಹೆಣ್ಣಿನ ಕಲ್ಪನೆಗಳನ್ನು ಸೃಷ್ಟಿಸಲು ತೊಡಗುತ್ತಾಳೆ. ಇದಕ್ಕೆ ಉದಾಹರಣೆಯಾಗಿ ಎಂ.ಆರ್. ಕಮಲರವರ 'ನಾನು' ಕವಿತೆಯನ್ನು ಗಮನಿಸುವುದಾದರೆ,

ನಾನು
ಗಂಡನೇ ದೇವರೆಂದು
ವನವಾಸ ಮಾಡಿ
ಅಗ್ನಿಗೆ ಧುಮುಕುವ
ಸೀತೆಯಲ್ಲ
ನಾನು
ಗಂಡನ ಪ್ರಾಣಕ್ಕಾಗಿ
ಯಮನ ಹಿಂದೆ
ನಾಯಿಯಂತಲೆದ
ಸಾವಿತ್ರಿಯೂ ಅಲ್ಲ.[೪೦]

ಹೀಗೆ ಪಾರಂಪರಿಕ ಸ್ತ್ರೀ ಪ್ರತೀಕಗಳಿಗೆ ವಿರುದ್ಧ ನೆಲೆಯಲ್ಲಿ ಸ್ತ್ರೀ ಚಿತ್ರಣಗಳನ್ನು ನೀಡಿದರೂ ಕೂಡ ಅವುಗಳ ಮುಖಾಂತರವೇ ಮೀರುವಿಕೆ ಸಾಧ್ಯವಾಗಿರುವುದನ್ನು ಗಮನಿಸಬಹುದು. ಒಟ್ಟಿನಲ್ಲಿ ಸ್ತ್ರೀಯ ದೃಷ್ಟಿಯಲ್ಲಿ ಭೂತವಿಲ್ಲದೆ ವರ್ತಮಾನದ ಕಲ್ಪನೆ ಸಾಧ್ಯವಾಗಿಲ್ಲ ಎಂಬುದನ್ನು ಮರೆಯುವಂತಿಲ್ಲ.

ಆದ್ದರಿಂದ ಮಹಿಳೆಯರು ಹಳೆಯ ಸಾಂಸ್ಕೃತಿಕ ಮೌಲ್ಯಗಳ ಒಪ್ಪಿಕೊಳ್ಳುವಿಕೆ ಅಥವಾ ಪ್ರಶ್ನಿಸುವಿಕೆಯ ನೆಲೆಯಲ್ಲೇ ಸ್ತ್ರೀ ಚಿತ್ರಣಗಳನ್ನು ಮಾಡುವಲ್ಲಿ ನಿಂತಿದ್ದಾರೆ ವಿನಃ ಆ ಸ್ಥಿತಿಯ ಮೀರುವಿಕೆ ಇನ್ನೂ ಸಾಧ್ಯವಾಗಿಲ್ಲ ಎಂದು ಹೇಳಬಹುದು. ಪುರುಷ ತಾತ್ವಿಕತೆಗೆ ವಿರುದ್ಧವಾದ ಸ್ತ್ರೀ ತಾತ್ವಿಕತೆಯನ್ನು ಕಟ್ಟುವಲ್ಲಿಯೇ ಅವರ ಸಮಗ್ರ ಸೃಜನಶೀಲ ಪ್ರತಿಭೆ ಪರ್ಯಾಯವಸನಗೊಂಡಿದೆ. ಮಾನವನ ಸಮಗ್ರತೆಯ ಪರಿಕಲ್ಪನೆ ಇನ್ನೂ ಸಾಧ್ಯವಾಗಿಲ್ಲವೆಂದೇ ಹೇಳಬಹುದು.

ತಾನು ಹೆಣ್ಣು ಎಂಬುದರ ಅರಿವಿನ ಮೂಲಕವೇ ಪ್ರತಿಕ್ಷಣವೂ ಬದುಕನ್ನು ಎದುರಿಸಬೇಕಾದ ಮಹಿಳೆ ಲಿಂಗತ್ವಕ್ಕೆ ಮೀರಿದ ಲಿಂಗಾತೀತವಾದ ಜಾಗವೊಂದಕ್ಕೆ ಮಾನಸಿಕವಾಗಿ ಪಾರಾಗುವುದು ಕಷ್ಟವೇ ಸರಿ. ಏಕೆಂದರೆ ಆ ಸ್ಥಿತಿ ಅವಳಿಗೆ ವಾಸ್ತವಕ್ಕೆ ಮೀರಿದ ಕಾಲ್ಪನಿಕ ನೆಲೆಯದು. ಇದಕ್ಕೆ ಉದಾಹರಣೆಯಾಗಿ ಎನ್.ವಿ. ಭಾಗ್ಯಲಕ್ಷ್ಮಿಯವರ 'ಪ್ರತಿ-ಕ್ರಿಯೆ' ಕವನವನ್ನು ಗಮನಿಸುವುದಾದರೆ,

ಹುಡುಗಿಯೊಬ್ಬಳು ಕಾಮದ ಬಗ್ಗೆ ಪದ್ಯ ಬರೆದರೆ

ಹುಡುಗರಿಗೆಲ್ಲಾ ಸೋಜಿಗ

.................................

ಹುಡುಗಿಯರಿಗೆಲ್ಲಾ ಕುತೂಹಲ

......................

ಮುದುಕರಿಗೆಲ್ಲಾ ಚಳಿಗೆ ಹೊತ್ತಿಸಿದ ಬೆಂಕಿ

......................

ಮುದುಕಿಯರು ಕೆಂಡವಾಗುತ್ತಾರೆ

....................

ಹುಡುಗಿ

ಕಾಮದ ಬಗ್ಗೆ ಪದ್ಯ ಬರೆಯುತ್ತಾಳೆ [೪೩]

ಹೆಣ್ಣು ಯಾವ ವಿಷಯದ ಬಗ್ಗೆ ಭಾಷಿಕವಾಗಿ ಮುಕ್ತ ಅಭಿವ್ಯಕ್ತಿ ನೀಡಬಾರದೆಂದು ಪರಂಪರೆಯಿಂದ ನಿಷಿದ್ಧವಾಗಿತ್ತೋ, ಆ ಕಾಮದ ಬಗ್ಗೆ ಬರೆಯಲು ತೊಡಗಿದಾಗಲೂ ಕೂಡ ತನ್ನ ಹೆಣ್ಣುತನದ ಮೂಲಕವೇ ಅಭಿವ್ಯಕ್ತಿ ಸಾಧ್ಯವಾಗುತ್ತದೆ ವಿನಃ ಅದನ್ನ ಮೀರುವ ನೆಲೆಯಿಂದಲ್ಲ. ಅದನ್ನು ಈ ಪದ್ಯದ 'ಹುಡುಗಿ' ಎಂಬ ಪದದ ಪುನಾರವರ್ತನೆ ಸ್ಪಷ್ಟವಾಗಿ ವ್ಯಕ್ತಪಡಿಸುತ್ತಿದೆ.

ತಾನಿರುವ ವಾಸ್ತವ ಬದುಕಿನಲ್ಲಿ ಸ್ವತಂತ್ರ ವ್ಯಕ್ತಿಯಾಗಿದ್ದಾಗ ಮಾತ್ರವೇ ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿಯುವುದು ಸಾಧ್ಯವಾಗುವುದು. ಆದರೆ ಮಹಿಳೆಗೆ ಹಿಂದೆಂದೂ ಕಲ್ಪನೆಗೂ ಎಟುಕದಂತಹ ಆ ಸ್ವಾತಂತ್ರ್ಯವನ್ನು ಇಂದು ಬಳಸಿಕೊಳ್ಳುವಾಗಲೂ ಆ ಮಾನಸಿಕ ದಿಗ್ಬಂಧನಗಳಲ್ಲಿ ಸಿಲುಕಿದ್ದಾಳೆ. ಮೊದಲು ಈ ಮಾನಸಿಕ ತೊಡಕುಗಳಿಂದ ಮುಕ್ತಳಾಗಬೇಕು. ಮಹಿಳೆಯರ ಬರಹ ಸಂಸ್ಕೃತಿಯು ಬಿತ್ತಿ ಬೆಳೆಸಿರುವ ಮನೋದಾಸ್ಯಕ್ಕೆ ಹೊಂದಿಕೊಂಡೇ ಬಿಡುಗಡೆಗೆ ಪ್ರಯತ್ನಿಸಿದೆ ಎಂಬುದು ಸತ್ಯ.

ಸಿಮೊನ್ ದ ಬೋವಾ''ಪ್ರತಿಯೊಬ್ಬ ವ್ಯಕ್ತಿಯನ್ನು ಆತನ ಭೂತಕಾಲಕ್ಕೆ ಕಟ್ಟುಬಿದ್ದಂತೆ ವಿವರಿಸಲಾಗುವುದೇ ಹೊರತು ಭವಿಷ್ಯದಲ್ಲಿ ತನ್ನ ಗುರಿಗಳಿಗೆ ಅನುಗುಣವಾಗಿ

ಹುಡುಗಿಯೊಬ್ಬಳು ಕಾಮದ ಬಗ್ಗೆ ಪದ್ಯ ಬರೆದರೆ
ಹುಡುಗರಿಗೆಲ್ಲಾ ಸೋಜಿಗ
................................
ಹುಡುಗಿಯರಿಗೆಲ್ಲಾ ಕುತೂಹಲ
.....................
ಮುದುಕರಿಗೆಲ್ಲಾ ಚಳಿಗೆ ಹೊತ್ತಿಸಿದ ಬೆಂಕಿ
.....................
ಮುದುಕಿಯರು ಕೆಂಡವಾಗುತ್ತಾರೆ
...................
ಹುಡುಗಿ
ಕಾಮದ ಬಗ್ಗೆ ಪದ್ಯ ಬರೆಯುತ್ತಾಳೆ [೪೩]

ಹೆಣ್ಣು ಯಾವ ವಿಷಯದ ಬಗ್ಗೆ ಭಾಷಿಕವಾಗಿ ಮುಕ್ತ ಅಭಿವ್ಯಕ್ತಿ ನೀಡಬಾರದೆಂದು ಪರಂಪರೆಯಿಂದ ನಿಷಿದ್ಧವಾಗಿತ್ತೋ, ಆ ಕಾಮದ ಬಗ್ಗೆ ಬರೆಯಲು ತೊಡಗಿದಾಗಲೂ ಕೂಡ ತನ್ನ ಹೆಣ್ಣುತನದ ಮೂಲಕವೇ ಅಭಿವ್ಯಕ್ತಿ ಸಾಧ್ಯವಾಗುತ್ತದೆ ವಿನಃ ಅದನ್ನ ಮೀರುವ ನೆಲೆಯಿಂದಲ್ಲ. ಅದನ್ನು ಈ ಪದ್ಯದ 'ಹುಡುಗಿ' ಎಂಬ ಪದದ ಪುನಾರವರ್ತನೆ ಸ್ಪಷ್ಟವಾಗಿ ವ್ಯಕ್ತಪಡಿಸುತ್ತಿದೆ.

ತಾನಿರುವ ವಾಸ್ತವ ಬದುಕಿನಲ್ಲಿ ಸ್ವತಂತ್ರ ವ್ಯಕ್ತಿಯಾಗಿದ್ದಾಗ ಮಾತ್ರವೇ ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿಯುವುದು ಸಾಧ್ಯವಾಗುವುದು. ಆದರೆ ಮಹಿಳೆಗೆ ಹಿಂದೆಂದೂ ಕಲ್ಪನೆಗೂ ಎಟುಕದಂತಹ ಆ ಸ್ವಾತಂತ್ರ್ಯವನ್ನು ಇಂದು ಬಳಸಿಕೊಳ್ಳುವಾಗಲೂ ಆ ಮಾನಸಿಕ ದಿಗ್ಬಂಧನಗಳಲ್ಲಿ ಸಿಲುಕಿದ್ದಾಳೆ. ಮೊದಲು ಈ ಮಾನಸಿಕ ತೊಡಕುಗಳಿಂದ ಮುಕ್ತಳಾಗಬೇಕು. ಮಹಿಳೆಯರ ಬರಹ ಸಂಸ್ಕೃತಿಯು ಬಿತ್ತಿ ಬೆಳೆಸಿರುವ ಮನೋದಾಸ್ಯಕ್ಕೆ ಹೊಂದಿಕೊಂಡೇ ಬಿಡುಗಡೆಗೆ ಪ್ರಯತ್ನಿಸಿದೆ ಎಂಬುದು ಸತ್ಯ.

ಸಿಮೊನ್ ದ ಬೋವಾ''ಪ್ರತಿಯೊಬ್ಬ ವ್ಯಕ್ತಿಯನ್ನು ಆತನ ಭೂತಕಾಲಕ್ಕೆ ಕಟ್ಟುಬಿದ್ದಂತೆ ವಿವರಿಸಲಾಗುವುದೇ ಹೊರತು ಭವಿಷ್ಯದಲ್ಲಿ ತನ್ನ ಗುರಿಗಳಿಗೆ ಅನುಗುಣವಾಗಿ

ಬೆಳೆಯುತ್ತಿರುವಂತೆ ಕಲ್ಪಿಸುವುದಿಲ್ಲ.''[೪೪] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾಳೆ. ಈ ಹಿನ್ನೆಲೆಯಲ್ಲಿ ಮಹಿಳೆಯರ ಬರಹಗಳು ಕೂಡ ಅವಳ ಭೂತಕಾಲದ ಹಿನ್ನೆಲೆಯಲ್ಲಿಯೇ ಕಟ್ಟುಬಿದ್ದಂತೆ ವಿವರಿಸಲಾಗಿದೆಯೇ ಹೊರತು ಭವಿಷ್ಯದಲ್ಲಿ ಅವಳ ಗುರಿಗಳಿಗೆ ಅನುಗುಣವಾಗಿ ಬೆಳೆಯುತ್ತಿರುವಂತೆ ಕಲ್ಪಿಸಲಾಗಿಲ್ಲ ಎಂದು ಹೇಳಬಹುದು. ಆದ್ದರಿಂದ ಅವಳಿಗೆ ಸ್ತ್ರೀಲಿಂಗತ್ವದ ದೃಷ್ಟಿಕೋನದಿಂದ ಹೊರಬಂದು ಸಮಗ್ರತೆಯ , ಏಕತೆಯ ಭಾವನೆಯನ್ನು ಭಾಷಿಕ ನೆಲೆಯಲ್ಲಿ ಸಾಧಿಸಲು ಇನ್ನೂ ಸಾಧ್ಯವಾಗಿಲ್ಲ. ಸಮಾಜದ ಒಳಗಣ್ಣು ತೆರೆಸುವ ಮತ್ತು ಅನನ್ಯತೆಯನ್ನು ಹುಡುಕುವ ಆತ್ಮಶೋಧನೆಯ ಹಂತವನ್ನು ತಲುಪಲು ಜೀವ ಶಾಸ್ತ್ರೀಯ ಹೆಣ್ತನದ ಭಿನ್ನತೆಯ ಮುಖಾಂತರವೇ ಹೊಸದಾದ ಸ್ತ್ರೀ ಸಂಸ್ಕೃತಿಯೊಂದನ್ನು ಸೃಜನಶೀಲನೆಲೆಯಲ್ಲಿ ನಿರ್ಮಿಸಲು ಸಾಧ್ಯವಾಯಿತೆ ವಿನಃ ಸ್ತ್ರೀ ಸಂಸ್ಕೃತಿಯೂ ಅಲ್ಲದ, ಪುರುಷ ಸಂಸ್ಕೃತಿಯೂ ಅಲ್ಲದ ಲಿಂಗಾತೀತವಾದ ಸಂಸ್ಕೃತಿಯನ್ನು ಸಾಧಿಸಲು ಸಾಧ್ಯವಾಗಿಲ್ಲವೆಂದು ಹೇಳಬಹುದು.

ಸಂಸ್ಕೃತಿಗಳ ಆದಿ ಪ್ರತಿಮೆಗಳು ಪ್ರತಿಯೊಬ್ಬ ವ್ಯಕ್ತಿಯನ್ನು ಅಪ್ರಜ್ಞಾಪೂರ್ವಕ ನೆಲೆಯಲ್ಲಿ ನಿರ್ದೇಶಿಸಿ ನಿಯಂತ್ರಿಸುತ್ತಿರುತ್ತವೆ ಎಂಬುದು ಸತ್ಯ. ಆದರೆ ಇವುಗಳ ಮಿತಿಯಿಂದ ಬಿಡಿಸಿಕೊಂಡು ಹೊರಬರುವಿಕೆ ಸಾಧ್ಯವಾಗುತ್ತದೆಯೇ ? ಖಂಡಿತ ಸಾಧ್ಯವಾಗುತ್ತದೆ. ಆದರೆ ಕೆಲವು ವಿಶಿಷ್ಟ ಪ್ರತಿಭೆಗಳಿಗೆ ಮಾತ್ರ ಸಾಂಸ್ಕೃತಿಕವಾದ ಎಲ್ಲಾ ದಿಗ್ಬಂಧನಗಳ ಚೌಕಟ್ಟನ್ನು ಮೀರಲು ಸಾಧ್ಯವಾಗುತ್ತದೆ. ಅವರ ರಚನೆಗಳು ಹಿಂದಿನ ಎಲ್ಲಾ ಕಲ್ಪನೆಗೂ ಮೀರಿದ, ದಿಗ್ಭ್ರಮೆ ಹುಟ್ಟಿಸುವಷ್ಟು ಹೊಸತನದಿಂದ ಕೂಡಿರುತ್ತವೆ.

ಪುರಾಣ ಪ್ರತೀಕಗಳನ್ನೇ ಉಪಯೋಗಿಸಿಕೊಂಡು ಆ ಸಾಂಸ್ಕೃತಿಕ ಭಾಷಿಕ ನೆಲೆಯಲ್ಲಿ ಹುದುಗಿರುವ ಅರ್ಥಗ್ರಹಿಕೆಯನ್ನು ಮೀರಿದ ವಿಸ್ತಾರವಾದ ಹೊಸ ಅರ್ಥ ಮೂಡಿಸುವಿಕೆ ಮಹಾನ್ ಪ್ರತಿಭೆಗಳಿಂದ ಸಾದ್ಯವಾಗಿದೆ. ಪ್ರತಿಯೊಬ್ಬ ಮಹಾನ್ ಸೃಷ್ಟಿಶೀಲ ಬರಹಗಾರರು ತಮ್ಮ ಪ್ರ ತಿಭೆಗೆ ತನ್ನ ರಚನಾಶಕ್ತಿಗೆ ತಕ್ಕಂತೆ ಪೂರ್ವಕವಿಗಳ ಕಾವ್ಯ ರೂಪಗಳನ್ನು ಅವಶ್ಯವಾಗಿ ಮಾರ್ಪಡಿಸಿಕೊಂಡೇ ಮುಂದುವರಿಯುತ್ತಾರೆ.

'ನೆಲತಾಯ ಮಾಯಕದ ಅರಗಿನರಮನೆಯಲ್ಲಿ
ಹಸ್ತಿನಾಪುರದ ಸ್ಮೃತಿ ಹೊತ್ತಲಲ್ಲಿ
ಮಯನಿರ್ಮಿತವೋ ಸುಯೋಧನ ರಚಿತವೋ
ಅಂತು ಕಡ್ಡಿಗೀರುವ ತನಕ ಶಂಕೆ ಇಲ್ಲ. [೪೫]

ಅಡಿಗರ 'ಭೂಮಿಗೀತ'ದ ಈ ಮೇಲಿನ ಸಾಲುಗಳು ಮಹಾಭಾರತದ ದುರ್ಯೋಧನನ ಅರಗಿನಮನೆಯ ಪ್ರಸಂಗವನ್ನು ನೆನಪಿಸುವುದರೊಂದಿಗೆ ಈ ಭೂಮಿಯೇ ಮಯನಿರ್ಮಿತ ಅರಮನೆ ಅಥವಾ ಅರಗಿನರಮನೆಯಾಗಿದೆ. ಕಡ್ಡಿಗೀರುವ ತನಕ ಶಂಕೆ ಬಗೆಹರಿಯುವುದಿಲ್ಲ. ನಾವು ನಿಂತ ನೆಲೆ ಎಷ್ಟು ಅಭದ್ರ, ಮನುಷ್ಯನಿಗೆ ಇಲ್ಲಿ ಭದ್ರತೆ ಇಲ್ಲ ಎಂಬ ಸ್ಥಾಪಿತ ಅರ್ಥದ ವಿಸ್ತಾರದ ಗ್ರಹಿಕೆಯನ್ನು ಸಾಧ್ಯವಾಗಿಸಿದೆ. ಪುರಾಣ ಪ್ರತಿಮೆಗಳ ಮುಖಾಂತರವೇ ನವೀನ ಪ್ರತಿಮೆಗಳ ಸೃಷ್ಟಿಯಾಗಿದೆ. ಮಹಾನ್ ಪ್ರತಿಭೆಯ ಸೂಕ್ಷ್ಮ ದೃಷ್ಟಿಗೆ ಆಲೋಚನೆಗಳು ಪುರಾತನ ಗರ್ಭದಿಂದ ಮೂಡಿ ವರ್ತಮಾನದ ಅಂತರಂಗವೂ ಕಂಡು ಭವಿಷ್ಯತ್ತನ್ನು ದರ್ಶಿಸುವ ಸೃಷ್ಟಿಕ್ರಿಯೆ ಸಾಧ್ಯವಾಗುತ್ತದೆ.

ಭಾಷೆ ಜ್ಯೋತಿಯನ್ನು ಪ್ರತಿಬಿಂಬಿಸುವ ದರ್ಪಣದಂತೆ. ಭಾಷೆಯಲ್ಲಿ ಪದಗಳು ಎಷ್ಟು ಮುಖ್ಯವೋ ಪದ ಪ್ರಕಾಶನ ಕ್ರಮವೂ ಅಷ್ಟೇ ಮುಖ್ಯ. ಇಂತಹ ಭಾಷಾ ಪ್ರಕಾಶನ ಸ್ಥಾಪಿತ ಅರ್ಥಕ್ಕಿಂತ ಭಿನ್ನವಾದ ಅರ್ಥವನ್ನು ಸ್ಫುರಿಸುತ್ತದೆ.

'ನಿಶ್ಯಬ್ಧ ನಿಶ್ಯಬ್ಧ ಶಬ್ಧದಾಚೆಯ ಶಬ್ಧ
ನಿಶ್ಯಬ್ಧವೆಂದರೂ ಮೌನವಲ್ಲ
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
ನಿಸ್ಸೀಮವೆಂದರೂ ಶೂನ್ಯವಲ್ಲ' [೪೬]

ಮಧುರಚೆನ್ನರ 'ನನ್ನನಲ್ಲ'ದ ಈ ಸಾಲುಗಳು ಶಬ್ಧದಾಚೆಗಿನ ನಿಶ್ಯಬ್ಧ, ನಿಶ್ಯಬ್ಧದಾಚೆಗಿನ ಶಬ್ಧ ಐಕ್ಯಾನುಭವ ತಲುಪಿದ ಸ್ಥಿತಿಯನ್ನು ರೂಪಿಸಿ ಶಬ್ಧಗಳ ಮೂಲಕ ನಿಶ್ಯಬ್ಧಲೋಕಕ್ಕೆ ಇಂದ್ರಿಯಗಳ ಮೂಲಕ ಅತೀಂದ್ರಿಯದ ನೆಲೆಗೇರುವ ಪದಗಳ ಹೊಸ ಪ್ರಕಾಶನವನ್ನು ಸಾಧಿಸಿದ್ದಾರೆ. ಸಾವಿರಾರು ಪುಟಗಳು ನೀಡದಂತಹ ಒಂದು ಹೊಸ ಅರ್ಥವನ್ನು ಒಂದೇ ಒಂದು ಸಾಲು ಅಥವಾ ಒಂದೇ ಪದ ಧ್ವನಿಸಿಬಿಡುತ್ತದೆ.

ಮನುಷ್ಯನು ಅತ್ಯುತ್ತಮನಾಗಬೇಕಾದರೆ ಆತನ ಕಲ್ಪನಾಶಕ್ತಿ ಅಗಾಧವೂ, ವಿಶಾಲವೂ ಆಗಿರಬೇಕು. ಅವನಿಗೆ ಇತರರ ಕಣ್ಣಿನಿಂದ ನೋಡುವ ಶಕ್ತಿಯೂ, ಇತರರ ಹೃದಯದಿಂದ ಅನುಭವಿಸುವಿಕೆಯೂ ಸಾಧ್ಯವಾಗಬೇಕು. ನಮ್ಮ ಕನ್ನಡದ ಸಂದರ್ಭದಲ್ಲಿ ಅಂತಹ ಒಂದು ಮಹಾನ್ ಚೇತನ್ ಕುವೆಂಪು. ಪ್ರಪಂಚದ ಪ್ರತಿಯೊಂದು ಜೀವಿಯನ್ನು ಏಕತೆಯ ದೃಷ್ಟಿಯಿಂದ ನೋಡುವ ಅವರ ರಚನೆ ಈ ಕೆಳಗಿನಂತಿದೆ.

ಇಲ್ಲಿ

ಯಾರೂ ಮುಖ್ಯರಲ್ಲ ;
ಯಾರೂ ಅಮುಖ್ಯರಲ್ಲ;
ಯಾವುದೂ ಯಃಕಶ್ಚಿತವಲ್ಲ!

ಇಲ್ಲಿ

ಯಾವುದಕ್ಕೂ ಮೊದಲಿಲ್ಲ;
ಯಾವುದಕ್ಕೂ ತುದಿಯಿಲ್ಲ;
ಯಾವುದೂ ಎಲ್ಲಿಯೂ ನಿಲ್ಲುವುದೂ ಇಲ್ಲ;
ಕೊನೆಮುಟ್ಟುವುದೂ ಇಲ್ಲ;

ಇಲ್ಲಿ

ಅವಸರವೂ ಸಾವಧಾನದ ಬೆನ್ನೇರಿದೆ !

ಇಲ್ಲಿ

ಎಲ್ಲಕ್ಕೂ ಇದೆ ಅರ್ಥ;
ಯಾವುದೂ ಅಲ್ಲ ವ್ಯರ್ಥ;
ನೀರೆಲ್ಲ ಊ ತೀರ್ಥ! [೪೭]

ಇಲ್ಲಿ ಯಾವ ಲಿಂಗವಿದೆ. ಯಾವ ವರ್ಣವಿದೆ? ಯಾವುದೂ ಇಲ್ಲ. ಆಗಲೇ ಈ ಗಂಡು-ಹೆಣ್ಣು, ಜಾತಿ, ಮತ, ಧರ್ಮ, ವರ್ಗ, ವರ್ಣ, ಪ್ರಾಣಿ, ಪಕ್ಷಿಗಳಾಚೆಗಿನ ಮಾನವತ್ವ ಮಾಡಲು ಸಾಧ್ಯ. ಇಂತಹ ಸೃಷ್ಟಿ ಎಂದಿಗೂ ಕೆಡುವುದಿಲ್ಲ. ಏಕೆಂದರೆ ನಿತ್ಯ ಸತ್ಯಗಳು ಶಾಶ್ವತ

ತತ್ವಗಳು, ಸರ್ವಕಾಲ, ದೇಶ, ಜನಾಂಗ, ಸಂದರ್ಭಗಳಲ್ಲಿಯೂ ಚಿರನೂತನವಾಗಿ ಬೆಳಗುತ್ತಲೆ ಇರುತ್ತವೆ. ಅದರ ಆತ್ಮ ಸರ್ವಕಾಲಕ್ಕೂ ಪ್ರಜ್ವಲಿಸುವ ತೇಜಸ್ಸು. ನಿತ್ಯಶಾಶ್ವತ ಜೀವನದ ಪರಿಪೂರ್ಣ ಪ್ರತಿಬಿಂಬ. ಸರ್ವಮನಸ್ಸುಗಳು ಅನುಸರಿಸಲೇ ಬೇಕಾದ ಆದರ್ಶ.

ಅತ್ಯುತ್ತಮ ಭಾಷಾ ಸೃಷ್ಟಿ ಪ್ರಯತ್ನದಿಂದ , ಕಷ್ಟದಿಂದ, ಶ್ರಮದಿಂದ, ಪಾಂಡಿತ್ಯದಿಂದ ಸೃಷ್ಟಿಯಾಗುವುದಿಲ್ಲ. ತನಗರಿವಿಲ್ಲದಂತೆಯೇ ಮಹಾನ್‌ಪ್ರತಿಭೆಗಳಲ್ಲಿ ಸೃಷ್ಟಿಯಾಗಿ ಬಿಡುತ್ತದೆ. ಈ ಕಲ್ಪನಾ ಶಕ್ತಿ ಮಹತ್ವವಾದುದು. ಅಲ್ಲಿದಿವ್ಯಾನುಭವ ಆವಿರ್ಭವಿಸುತ್ತದೆ. ಆಗ ಎಲ್ಲಾ ತಮ್ಮ ವಿರೋಧ ಭಾವವನ್ನು ಮೀರಿ ಒಂದನ್ನೊಂದು ಆಲಿಂಗಿಸಿಕೊಳ್ಳುತ್ತವೆ. ಹೊಸಭಾಷೆಯ ಸೃಷ್ಟಿ ಒಬ್ಬ ವ್ಯಕ್ತಿಯ ಅಥವಾ ಒಂದು ವರ್ಗದ ಸೃಷ್ಟಿಗಿಂತ ಅದೊಂದು ಒಟ್ಟಾರೆ ಸಮುದಾಯದ ಸಾಂಸ್ಕೃತಿಕ ಉತ್ಪಾದನೆಯಾಗುವುದು ಉತ್ತಮ.

ಆಗಲೇ ಭಾಷೆಯೊಳಗಿನ ಪುರುಷತ್ವ-ಸ್ತ್ರೀತ್ವದ ಎಲ್ಲಾ ಮಿತಿಗಳನ್ನು ಮೀರಿ ಸಮಗ್ರ ಏಕತೆಯ ಭಾವನೆಯನ್ನು ಸಾಧಿಸಲು ಸಾಧ್ಯ.

## ಅಡಿಟಿಪ್ಪಣಿ

೧. ಡಾ. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ೨೦೦೨.ಪು. ೧೫೩. ಇಲ್ಲಿ ಉಲ್ಲೇಕಿತ

೨. ಡಾ. ಬಿ.ಎನ್. ಸುಮಿತ್ರಾಬಾಯಿ, ಸ್ತ್ರೀವಾದ, ೨೦೦೬, ಪು. ೮೪.

೩. ಶೋವಾಲ್ಟರ್ A Literature of their own, 1999. P-3. ಇಲ್ಲಿ ಉಲ್ಲೇಖಿತ

೪. ಡಾ. ಬಿ.ಎನ್. ಸುಮಿತ್ರಾಬಾಯಿ, ಸ್ತ್ರೀವಾದ, ೨೦೦೬. ಪು.೮೩-೮೪.

೫. ಅದೇ, ಪು.೬೪. ಇಲ್ಲಿ ಉಲ್ಲೇಖಿತ

೬. ಅದೇ, ಪು.೩೩, ಇಲ್ಲಿ ಉಲ್ಲೇಕಿತ

೭. ಡಿ.ಆರ್. ನಾಗರಾಜು, ಸಾಹಿತ್ಯ ಕಥನ, ೧೯೯೬, ಪು.೧೪೫.

೮. ಕೊಡಗಿನ ಗೌರಮ್ಮ, ವಾಣಿಯ ಸಮಸ್ಯೆ, ಕಂಬನಿ ಮತ್ತು ಚಿಗುರು (ಕ.ಸಂ), ೧೯೮೫. ಪು.೧೭

೯. ವೀಣಾಶಾಂತೇಶ್ವರ, ಶೋಷಣೆ ಬಂಡಾಯ ಇತ್ಯಾದಿ, ನಡೆದದ್ದೇ ದಾರಿ (ಸಮಗ್ರ ಕಥನ ಸಾಹಿತ್ಯ), ೨೦೦೬, ಪು.೩೫೯.

೧೦. ಶಶಿಕಲಾ ವೀರಯ್ಯ ಸ್ವಾಮಿ, ಗುಬ್ಬಿಮನಿ, ಆಧುನಿಕ ಕನ್ನಡ ಕವನಗಳು (ಸಂ.)೨೦೦೬, ಪು.೧೨೫.

೧೧. ವೈದೇಹಿ, ಅವಲಂಬಿತರು, ಅವಳ ಕತೆಗಳು (ಸಂ.) ಪು. ೭೦.

೧೨. ಕೊಡಗಿನ ಗೌರಮ್ಮ, ಕೌಸಲ್ಯಾನಂದನ, ಕಂಬನಿ ಮತ್ತು ಚಿಗುರು (ಕ.ಸಂ.),೧೯೮೫, ಪು.೫೧.

೧೩. ವೀಣಾಶಾಂತೇಶ್ವರ, ಮುಳ್ಳುಗಳು, ನಡೆದದ್ದೇ ದಾರಿ (ಸ.ಕ.ಸಂ.), ೨೦೦೬, ಪು.೯.

೧೪. ಅದೇ, ಶೋಷಣೆ ಬಂಡಾಯ ಇತ್ಯಾದಿ, ಪು.೩೫೮.

೧೫. ಅದೇ, ಹೊರಟುಹೋದವನು, ಪು.೧೧೭.

೧೬. ಅದೇ, ಪು. ೧೨೦.

೧೭. ಅದೇ, ಪು.೧೨೨.

೧೮. ಶೋವಾಲ್ಟರ್ A Literature of their own, 1999. P-4

೧೯. ವೀಣಾಶಾಂತೇಶ್ವರ, ಶೋಷಣೆ ಬಂಡಾಯ ಇತ್ಯಾದಿ, ನಡೆದದ್ದೇ ದಾರಿ (ಸ.ಕ.ಸಂ.), ೨೦೦೬, ಪು.೩೫೯.

೨೦. ಅದೇ, ಪು. ೩೫೬.

೨೧. ಅದೇ, ಪು.೩೬೬.

೨೨. ವೀಣಾಶಾಂತೇಶ್ವರ, ನಡೆದದ್ದೇ ದಾರಿ (ಕ.ಸಂ.), ೨೦೦೬, ಪು.೪೭೨. ಇಲ್ಲಿ ಉಲ್ಲೇಖಿತ

## ಅಡಿಟಿಪ್ಪಣಿ

೧. ಡಾ. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ೨೦೦೨.ಪು. ೧೫೩. ಇಲ್ಲಿ ಉಲ್ಲೇಕಿತ

೨. ಡಾ. ಬಿ.ಎನ್. ಸುಮಿತ್ರಾಬಾಯಿ, ಸ್ತ್ರೀವಾದ, ೨೦೦೬, ಪು. ೮೪.

೩. ಶೋವಾಲ್ಟರ್ A Literature of their own, 1999. P-3. ಇಲ್ಲಿಉಲ್ಲೇಖಿತ

೪. ಡಾ. ಬಿ.ಎನ್. ಸುಮಿತ್ರಾಬಾಯಿ, ಸ್ತ್ರೀವಾದ, ೨೦೦೬. ಪು.೮೩-೮೪.

೫. ಅದೇ, ಪು.೬೪. ಇಲ್ಲಿಉಲ್ಲೇಖಿತ

೬. ಅದೇ, ಪು.೩೩, ಇಲ್ಲಿ ಉಲ್ಲೇಕಿತ

೭. ಡಿ.ಆರ್. ನಾಗರಾಜು, ಸಾಹಿತ್ಯ ಕಥನ, ೧೯೯೬, ಪು.೧೪೫.

೮. ಕೊಡಗಿನ ಗೌರಮ್ಮ, ವಾಣಿಯ ಸಮಸ್ಯೆ, ಕಂಬನಿ ಮತ್ತು ಚಿಗುರು (ಕ.ಸಂ), ೧೯೮೫. ಪು.೧೭

೯. ವೀಣಾಶಾಂತೇಶ್ವರ, ಶೋಷಣೆ ಬಂಡಾಯ ಇತ್ಯಾದಿ, ನಡೆದದ್ದೇ ದಾರಿ (ಸಮಗ್ರ ಕಥನ ಸಾಹಿತ್ಯ), ೨೦೦೬, ಪು.೩೫೯.

೧೦. ಶಶಿಕಲಾ ವೀರಯ್ಯ ಸ್ವಾಮಿ, ಗುಬ್ಬಿಮನಿ, ಆಧುನಿಕ ಕನ್ನಡ ಕವನಗಳು (ಸಂ.)೨೦೦೬, ಪು.೧೨೫.

೧೧. ವೈದೇಹಿ, ಅವಲಂಬಿತರು, ಅವಳ ಕತೆಗಳು (ಸಂ.) ಪು. ೭೦.

೧೨. ಕೊಡಗಿನ ಗೌರಮ್ಮ, ಕೌಸಲ್ಯಾನಂದನ, ಕಂಬನಿ ಮತ್ತು ಚಿಗುರು (ಕ.ಸಂ.),೧೯೮೫, ಪು.೫೧.

೧೩. ವೀಣಾಶಾಂತೇಶ್ವರ, ಮುಳ್ಳುಗಳು, ನಡೆದದ್ದೇ ದಾರಿ (ಸ.ಕ.ಸಂ.), ೨೦೦೬, ಪು.೯.

೧೪. ಅದೇ, ಶೋಷಣೆ ಬಂಡಾಯ ಇತ್ಯಾದಿ, ಪು.೩೫೮.

೧೫. ಅದೇ, ಹೊರಟುಹೋದವನು, ಪು.೧೧೭.

೧೬. ಅದೇ, ಪು. ೧೨೦.

೧೭. ಅದೇ, ಪು.೧೨೨.

೧೮. ಶೋವಾಲ್ಟರ್ A Literature of their own, 1999. P-4

೧೯. ವೀಣಾಶಾಂತೇಶ್ವರ, ಶೋಷಣೆ ಬಂಡಾಯ ಇತ್ಯಾದಿ, ನಡೆದದ್ದೇ ದಾರಿ (ಸ.ಕ.ಸಂ.), ೨೦೦೬, ಪು.೩೫೯.

೨೦. ಅದೇ, ಪು. ೩೫೬.

೨೧. ಅದೇ, ಪು.೩೬೬.

೨೨. ವೀಣಾಶಾಂತೇಶ್ವರ, ನಡೆದದ್ದೇ ದಾರಿ (ಕ.ಸಂ.), ೨೦೦೬, ಪು.೪೭೨. ಇಲ್ಲಿ ಉಲ್ಲೇಖಿತ

೨೩. ಅದೇ, ಕವಲು, ಪು. ೧೩೫.

೨೪. ಅದೇ, ತಿರುಗಿಹೋದಳು, ಪು.೨೦೨.

೨೫. ಅದೇ, ಪು.೨೧೧.

೨೬. ಅದೇ, ಪು. ೨೧೧.

೨೭. ಅದೇ, ಶೋಷಣೆ ಬಂಡಾಯ ಇತ್ಯಾದಿ, ಪು. ೪೧೮.

೨೮. ಅದೇ, ಅವಳ ಸ್ವಾತಂತ್ರ್ಯ, ಪು. ೧೬೩.

೨೯. ಅದೇ, ಮುಳ್ಳುಗಳು, ಪು.೩೧.

೩೦. ಡಾ. ಬಿ.ಎನ್. ಸುಮಿತ್ರಾಬಾಯಿ, ಸ್ತ್ರೀವಾದ ೨೦೦೨, ಪು.೨೫. ಇಲ್ಲಿ ಉಲ್ಲೇಖಿತ

೩೧. ತೇಜಸ್ವಿನಿ ನಿರಂಜನ/ಸೀಮಂತಿನಿ ನಿರಂಜನ, ಸ್ತ್ರೀವಾದಿ ಸಾಹಿತ್ಯ ವಿಮರ್ಶೆ (ಸಂ.), ಸುವರ್ಣ ಸಾಹಿತ್ಯ ವಿಮರ್ಶೆ, ೨೦೦೬, ಪು. ೪೭೦.

೩೨. ಯು.ಆರ್. ಅನಂತಮೂರ್ತಿ, ಸಂಸ್ಕಾರ, ೨೦೦೬, ಪು.೧೭.

೩೩. ಅದೇ, ಪು. ೩೧.

೩೪. ತ್ರಿವೇಣಿ, ತಾವರೆಯ ಕೊಳ, ೧೯೯೭, ಪು.೭

೩೫. ವೀಣಾಶಾಂತೇಶ್ವರ, ಗಂಡಸರು, ನಡೆದದ್ದೇ ದಾರಿ, (ಸ.ಕ.ಸಂ.), ೨೦೦೬, ಪು.೩೩೯.

೩೬. ಯು.ಆರ್. ಅನಂತಮೂರ್ತಿ, ಭಾರತೀಪುರ, ೧೯೭೩, ಪು.೪೭.

೩೭. ಅದೇ, ಪು.೪೯.

೩೮. ಅದೇ, ಪು.೧೬೪.

೩೯. ಯು.ಆರ್. ಅನಂತಮೂರ್ತಿ, ಸಂಸ್ಕಾರ, ೨೦೦೬, ಪು. ೧೬

೪೦. ಡಾ. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ೨೦೦೨, ಪು.೧೫೩.ಇಲ್ಲಿ ಉಲ್ಲೇಖಿತ

೪೧. ಭಾಗ್ಯ ಜಯಸುದರ್ಶನ, ಬಳುವಳಿ, ಆಧುನಿಕ ಕನ್ನಡ ಕವನಗಳು (ಸಂ.), ೨೦೦೬, ಪು.೧೨೨.

೪೨. ಎಂ.ಆರ್. ಕಮಲ, ನಾನು, ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯ ಸ್ವರೂಪ, ೨೦೦೬, ಪು. ೧೮೮. ಇಲ್ಲಿ ಉಲ್ಲೇಖಿತ

೪೩. ಎನ್.ವಿ. ಭಾಗ್ಯಲಕ್ಷ್ಮಿ, ಪ್ರತಿ-ಕ್ರಿಯೆ, ಆಧುನಿಕ ಕನ್ನಡ ಕವನಗಳು (ಸಂ.), ೨೦೦೬, ಪು. ೧೨೦-೧೨೧.

೪೪. ಸಿಮೋನ್ ದ ಬೋವಾ ದ ಸೆಕೆಂಡ್ ಸೆಕ್ಸ್, (ಅನು) ಡಾ. ಎಚ್.ಎಸ್.ಶ್ರೀಮತಿ, ೨೦೦೭, ಪು.೫೮.

೪೫. ಗೋಪಾಲಕೃಷ್ಣ ಅಡಿಗ, ಭೂಮಿಗೀತ

೪೬. ಮಧುರಚೆನ್ನ, ನನ್ನ ನಲ್ಲ

೪೭. ಕುವೆಂಪು, ಮಲೆಗಳಲ್ಲಿ ಮದುಮಗಳು, ೨೦೦೧.

# ಅಧ್ಯಾಯ -೫

## ಮಾಹಿತಿ ಸಂಗ್ರಹಣೆ ಮತ್ತು ವಿಶ್ಲೇಷಣೆ

ಪ್ರಪಂಚದಲ್ಲಿನ ಪ್ರತಿಯೊಂದು ಭಾಷೆಯು ಪುರುಷ ಪ್ರಾಧಾನ್ಯತೆಯನ್ನು ಒಳಗೊಂಡಿದೆ ಎಂಬ ಮಾತು ಒಪ್ಪಿತವಾದುದು. ಅನೇಕ ಶತಮಾನಗಳಿಂದ ಸ್ತ್ರೀಯು ಕೂಡಾ ತನ್ನ ಸ್ವಂತ ಅಭಿವ್ಯಕ್ತಿಗೆ ಈ ಪುರುಷ ಪ್ರಧಾನ ಭಾಷೆಯನ್ನೇ ಬಳಸುತ್ತಾ ಬಂದಿದ್ದಳು. ಇತ್ತೀಚಿನ ದಶಕಗಳಲ್ಲಿ ಮಹಿಳೆಯು ಎಲ್ಲಾ ಕ್ಷೇತ್ರಗಳಲ್ಲಿಯೂ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ಮುಂದಾದಳು. ಅದೇ ರೀತಿ ಭಾಷೆಯಲ್ಲೂ ಕೂಡ ಪುರಷವಾಚಕ ಗಳಿಂದಲೇ ಗುರುತಿಸಿಕೊಳ್ಳುತ್ತಿದ್ದವಳು, ತನ್ನ ಪ್ರತ್ಯೇಕ ಅಸ್ಥಿತ್ವವನ್ನು ಸ್ಥಾಪಿಸಿಕೊಳ್ಳಲು ಸ್ತ್ರೀವಾಚಕಗಳ ನಿರಂತರ ಸೃಷ್ಟಿಕ್ರಿಯೆಯಲ್ಲಿ ತೊಡಗಿದಳು. ಈ ಭಾಷಿಕ ಸೃಷ್ಟಿಕ್ರಿಯೆ ಬಳಕೆಯ ನೆಲೆಯಲ್ಲಿ ಆ ಸಮುದಾಯದಲ್ಲಿ ಸಫಲವಾಗಿದೆಯೇ ? ಇಲ್ಲವೇ? ಎಂಬುದನ್ನು ಗುರುತಿಸಿಕೊಳ್ಳುವಿಕೆ ಅಧ್ಯಯನದ ಉದ್ದೇಶ.

### ಮಾಹಿತಿ ಸಂಗ್ರಹಣೆಯ ಉದ್ದೇಶ

ಒಂದು ಸಮುದಾಯದಲ್ಲಿ ಭಾಷೆಯ ಸ್ಪಷ್ಟಕ್ರಿಯೆ ಕೇವಲ ಪ್ರಜ್ಞಾಪೂರ್ವಕ ನೆಲೆಯಲ್ಲಿ ನಡೆದರೆ ಸಾಲದು. ಅದು ಅಪ್ರಜ್ಞಾಪೂರ್ವಕ ನೆಲೆಯಲ್ಲಿ ಆ ಸಮುದಾಯದ ಸಾಂಸ್ಕೃತಿಕ ಭಾಗವಾಗಿ ಬಳಕೆಗೊಂಡಾಗ ಮಾತ್ರ ಅದರ ಸಂಪೂರ್ಣ ಯಶಸ್ಸು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಕೆಲವು ಪ್ರಶ್ನೆಗಳನ್ನಿಟ್ಟುಕೊಂಡು ಸಂಗ್ರಹಿಸಿದ ಮಾಹಿತಿಯ ವಿಶ್ಲೇಷಣೆ ಕೈಗೊಳ್ಳಲಾಗಿದೆ. ಆ ಪ್ರಶ್ನೆಗಳೆಂದರೆ,

- ❐ ಸ್ತ್ರೀವಾಚಕಗಳ ಬಳಕೆ ಸಾಮಾಜಿಕ ಸಂದರ್ಭದಲ್ಲಿ ವಯಕ್ತಿಕ ನೆಲೆ ಹಾಗೂ ಸಮುದಾಯದ ನಲೆಗಳೆರಡರಲ್ಲಿಯೂ ಅಸ್ಥಿತ್ವ ಪಡೆದಿವೆಯೇ ? ಪಡೆಯುತ್ತಿವೆಯೇ ಅಥವಾ ಇಲ್ಲವೇ ?
- ❐ ಎಲ್ಲಾ ವಯೋಮಾನದ ಸ್ತ್ರೀ-ಪುರುಷರಿಬ್ಬರಲ್ಲೂ ಸ್ತ್ರೀವಾಚಕಗಳು ಹಾಗೂ ಪುರುಷ ವಾಚಕಗಳನ್ನು ಪ್ರಜ್ಞಾಪೂರ್ವಕವಾಗಿ ಬಳಸುವ ಪರಿಪಾಠ ಶುರುವಾಗಿದೆಯೇ? ಅಥವಾ ಇಲ್ಲವೇ ?

- ❒ ಪುರುಷವಾಚಕಗಳು / ಸ್ತ್ರೀವಾಚಕಗಳು ಎಂದು ಗೆರೆ ಎಳೆದು ಬಳಸುವುದಕ್ಕಿಂತ ಹೊಸ ರೀತಿಯ ಪದಗಳನ್ನು ಸೃಷ್ಟಿಸಿ ಬಳಸುವ ಪರಿಪಾಠವೇನಾದರೂ ಇದೆಯೇ ?

- ❒ ಸ್ತ್ರೀವಾಚಕ ಪದಗಳ ಬಳಕೆಯ ಮಾತಂತಿರಲಿ ಅದರ ಗ್ರಹಿಕೆಯಾದರೂ ಆ ಸಮುದಾಯದ ಜನರೆಲ್ಲರಲ್ಲಿಯೂ ಮೂಡಿದೆಯೇ ?

ಈ ಮೇಲಿನ ಪ್ರಶ್ನೆಗಳನ್ನಿಟ್ಟುಕೊಂಡು ಸಂಗ್ರಹಿಸಿದ ಮಾಹಿತಿಯನ್ನು ವಿಶ್ಲೇಷಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

**ಆಯ್ಕೆಯ ಪ್ರದೇಶ ಮತ್ತು ವಿವಿಧ ವಯೋಮಾನ**

ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಪ್ರದೇಶ 'ಗ್ರಾಮೀಣ ಪ್ರದೇಶ' ಇಂದು ಸೃಷ್ಟಿಯಾಗುತ್ತಿರುವ ಸ್ತ್ರೀಲಿಂಗ ವಾಚಕಗಳು ಆ ಸಮುದಾಯದ ಎಲ್ಲಾ ಸ್ತರದ ವ್ಯಕ್ತಿಗಳಲ್ಲಿಯೂ ಬಳಕೆಗೆ ಒಳಪಡುತ್ತಿದೆಯೇ ಎಂಬ ಅಂಶವನ್ನು ಸ್ಪಷ್ಟಪಡಿಸಿಕೊಳ್ಳಲು ವಿವಿಧ ವಯೋಮಾನದ ಸ್ತ್ರೀ -ಪುರುಷರು ಬಳಸುವ ಭಾಷಿಕ ನೆಲೆಯನ್ನು ಗಮನದಲ್ಲಿರಿಸಿಕೊಂಡು ಚರ್ಚಿಸಲಾಗುತ್ತದೆ. ಅವುಗಳೆಂದರೆ,

ವಿವಿಧ ವಯೋಮಾನ

೧. ೨೦

೨. ೪೦

೩. ೬೦+

**ಮಾಹಿತಿ ಸಂಗ್ರಹಣೆಯ ವಿಧಾನ**

ಭಾಷೆಯಲ್ಲಿನ ಸ್ತ್ರೀವಾಚಕ ಮತ್ತು ಪುರುಷವಾಚಕಗಳ ಕ್ರಮಬದ್ಧ ಬಳಕೆಯ ನೆಲೆಯನ್ನು ಗುರುತಿಸಿಕೊಳ್ಳಲು ಅವರ ಬರಹದ ಭಾಷೆಯನ್ನು ಅಧ್ಯಯನ ಅವಲಂಬಿಸಿದೆ. ಕೆಲವು ವಿಷಯಗಳನ್ನು ವಿವಿಧ ವಯೋಮಾನದ ಸ್ತ್ರಿ-ಪುರುಷ ಇಬ್ಬರಿಗೂ ನೀಡಿ ಅವರ ಬಳಿ ಒಂದು ಸಣ್ಣ ಟಿಪ್ಪಣಿ ರಚಿಸಿಕೊಂಡು ಆ ಟಿಪ್ಪಣಿಗಳಲ್ಲಿ ಬಳಸುವ ಭಾಷಿಕ ನೆಲೆಯನ್ನು ಗುರುತಿಸಿಕೊಳ್ಳಲಾಗಿದೆ.

ಟಿಪ್ಪಣಿಗಳ ವಿಷಯಗಳು ಮತ್ತು ಉದ್ದೇಶ

೧. ಸಂಸ್ಕೃತಿ ಪ್ರತೀಕವಾಗಿ ನಮ್ಮ ದೇಶ

೨. ಬದಲಾದ ಬದುಕು ಮತ್ತು ಉದ್ಯೋಗಾವಕಾಶ

೩. ಮಾಧ್ಯಮ ಮತ್ತು ಜೀವನ

೪. ಆರ್ಥಿಕ ಸ್ವಾವಲಂಬನೆ

೫. ವಿವಾಹ ಮತ್ತು ವಿವಾಹ ವಿಚ್ಛೇದನ

ಒಂದು ಸಮುದಾಯದ 'ಸಂಸ್ಕೃತಿ' ಪರಿಕಲ್ಪನೆಯ ಗ್ರಹಿಕೆಯ ನೆಲೆಯಲ್ಲಿ ಸ್ತ್ರೀ-ಪುರುಷ ಪಾತ್ರಗಳ ಗ್ರಹಿಕೆ ಎಂಥದ್ದು, ಅಲ್ಲಿ ಬಳಕೆಗೊಳ್ಳುವ ಭಾಷೆಯ ಸ್ವರೂಪ ಯಾವುದು, ಹಿಂದೆ ಉದ್ಯೋಗಾವಕಾಶ ಮತ್ತು ಆರ್ಥಿಕ ಸ್ವಾವಲಂಬನೆಗಳಿಂದ ವಂಚಿತಳಾಗಿದ್ದ ಸ್ತ್ರೀಯು ಇಂದು ಅವುಗಳನ್ನು ಪಡೆದುಕೊಂಡು ಅವಳ ಬದುಕು ಬದಲಾಗುತ್ತಿರುವಾಗ ಭಾಷಿಕ ನೆಲೆಯಲ್ಲೇನಾದರೂ ಬದಲಾವಣೆಗಳನ್ನು ಕಂಡುಕೊಂಡಿದ್ದಾಳೆಯೇ ? ಮಾಧ್ಯಮಗಳು ಸ್ತ್ರೀ ಪುರುಷರ ಜೀವನದಲ್ಲಿ ವಹಿಸುತ್ತಿರುವ ಪಾತ್ರ ಯಾವ ರೀತಿಯದು, ಅಲ್ಲಿನ ಭಾಷೆಯ ಬಳಕೆಯ ನೆಲೆಯಾವುದು ? ಸಾಮಾಜಿಕ ಸಂಸ್ಥೆಯಾದ ವಿವಾಹ ಹಾಗೂ ಅದನ್ನು ವಿಘಟಿಸುವ 'ವಿಚ್ಛೇದನ' ಗಳಲ್ಲಿ ಸ್ತ್ರೀ-ಪುರುಷರ ಪಾತ್ರವೇನು ? ಎಂಬ ವಿಚಾರಗಳ ಹಿನ್ನೆಲೆಯಲ್ಲಿ ಅವರು ಬಳಸುವ ಭಾಷಿಕ ನೆಲೆಯನ್ನು ಗುರುತಿಸಿಕೊಳ್ಳಲು ಈ ಮೇಲಿನ ವಿಷಯಗಳನ್ನು ಟಿಪ್ಪಣಿ ರಚಿಸಲು ನೀಡಲಾಗಿತ್ತು. ಟಿಪ್ಪಣಿಗಳಲ್ಲಿ ಅವರು ವ್ಯಕ್ತಪಡಿಸಿರುವ ವಿಚಾರಗಳಿಗಿಂತ, ಆ ವಿಚಾರಗಳ ಮಂಡನೆಗೆ ಅವರು ಬಳಸಿರುವ ಭಾಷೆಯನ್ನು ಮಾತ್ರಗಮನಿಸಲಾಗುತ್ತದೆ.

ಈ ಟಿಪ್ಪಣಿಗಳಲ್ಲಿ ೨೦ ವರ್ಷದವರಲ್ಲಿ ೧೦ ಸ್ತ್ರೀಯರಿಂದ, ೧೦ ಪುರುಷರಿಂದ, ೪೦ವರ್ಷದವರಲ್ಲಿ ೮ ಸ್ತ್ರೀಯರಿಂದ ೭ ಪುರುಷರಿಂದ ಹಾಗೂ ೬೦+ ವರ್ಷದವರಲ್ಲಿ ೪ ಸ್ತ್ರೀಯರಿಂದ ೫ ಪುರುಷರಿಂದ ರಚಿಸಲಾಗಿತ್ತು. ಒಟ್ಟು ೪೪ ಟಿಪ್ಪಣಿಗಳನ್ನು ಜುಲೈ ೨೦೦೯ ರಿಂದ ಆಗಸ್ಟ್ ೨೦೦೯ ರ ಅವಧಿಯಲ್ಲಿ ರಚಿಸಿಕೊಳ್ಳಲಾಗಿತ್ತು.

**ಸಮುದಾಯದ ನೆಲೆ**

ಈ ಟಿಪ್ಪಣಿಗಳಲ್ಲಿ ಸಮುದಾಯ ವಾಚಕ ನೆಲೆಯಲ್ಲಿ ಬಳಕೆಗೊಳ್ಳುವ ಸ್ತ್ರೀ-ಪುರುಷರ ಭಾಷಿಕ ನೆಲೆಯನ್ನು ಗುರುತಿಸುವಲ್ಲಿ ಎಲ್ಲಿಯೂ ಹೆಣ್ಣಿನ ಪ್ರತ್ಯೇಕ ಅಸ್ಥಿತ್ವ ಕಂಡು ಬಂದಿಲ್ಲ. ಅದು ಪುರುಷ ಬರವಣಿಗೆಗಳಿರಲಿ, ಮಹಿಳೆಯರ ಬರವಣಿಗಳಿರಲಿ ಎಲ್ಲಿಯೂ ಸ್ತ್ರೀವಾಚಕಗಳ ಬಳಕೆ ಕಂಡು ಬಂದಿಲ್ಲ ಎಂದು ಹೇಳಬಹುದು. ಯಾವುದೇ ವಿಚಾರವನ್ನು ಕುರಿತು ಮಾತನಾಡಬೇಕಾದಾಗಲೂ ಸ್ತ್ರೀ- ಪುರುಷರಿಬ್ಬರೂ ಕೂಡ ಪುರುಷ ವಾಚಕಗಳಿಂದಲೇ ಪ್ರಾರಂಭಮಾಡಿ ಅವುಗಳಿಂದಲೇ ಕೊನೆಗೊಳಿಸುತ್ತಾರೆ. ಅದರ ವ್ಯಾಪ್ತಿಯೊಳಗೆ ಸ್ತ್ರೀಯೂ ಸೇರಿರುತ್ತಾಳೆ ಎಂಬ ಗ್ರಹಿಕೆ ಎಲ್ಲರಲ್ಲಿಯೂ ಕೆಲಸ ಮಾಡುತ್ತಿದೆ ವಿನಃ ಅವಳಿಗೆ ಪ್ರತ್ಯೇಕ ಅಸ್ಥಿತ್ವವಿಲ್ಲವಾಗಿದೆ. ಈ ಅಂಶವನ್ನು ಕೆಲವು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಿಕೊಳ್ಳುವುದಾದರೆ,

೧. **ಮನುಷ್ಯನು** ಕಾಲಕ್ಕೆ ತಕ್ಕಂತೆ ಬದಲಾವಣೆ **ಆಗುತ್ತಿದ್ದಾನೆ.** ಅಭಿವೃದ್ಧಿಯ ಪಥವನ್ನು **ಕಂಡುಕೊಳ್ಳುತ್ತಿದ್ದಾನೆ.** ತನ್ನ ದಿನನಿತ್ಯದ ಕಾರ್ಯಗಳಲ್ಲೂ ಬದಲಾವಣೆಯನ್ನು **ಅನುಸರಿಸುತ್ತಿದ್ದಾನೆ.** ಉದಾ : ಯಾವುದೇ ರೀತಿಯ ಆಧುನಿಕ ಯಂತ್ರಗಳನ್ನು ಕಂಡುಹಿಡಿದಿರುವುದು ಆಗಬಹುದು. ಯಾವ ರೀತಿ ಅತ್ಯಂತ ಸುಲಭದ ಮಾರ್ಗವನ್ನು **ಕಂಡುಕೊಳ್ಳುತ್ತಿದ್ದಾನೋ** ಪ್ರತ್ಯಕ್ಷವಾಗಿ / ಪರೋಕ್ಷವಾಗಿ ಅದೇ ರೀತಿ ತನ್ನ ನಾಶಕ್ಕೂ ಸಹ ಅವನೆ **ಕಾರಣಾಗುತ್ತಿದ್ದಾನೆ.** ವೈಜ್ಞಾನಿಕ ರೀತಿಯಲ್ಲೂ ಅಪಾರ ಯಶಸ್ಸನ್ನು ತನ್ನ **ಮುಡಿಗೇರಿಸಿಕೊಂಡಿದ್ದಾನೆ.**

ಮಾಹಿತಿಗಾರ್ತಿ: ನೇತ್ರಾವತಿ.ಎನ್. ವಯಸ್ಸು: ೨೦

೨. ಸಮಾಜದಲ್ಲಿ ನಮ್ಮನ್ನು **ಒಳ್ಳೆಯವ**ರೆಂದು ಗುರ್ತಿಸಿಕೊಳ್ಳುವಲ್ಲಿ ಸಂಸ್ಕೃತಿಯು ಸಹಾಯಕವಾಗಿದೆ. ಸಂಸ್ಕೃತಿಯು ಒಬ್ಬ ವ್ಯಕ್ತಿಯನ್ನು **ನಾಗರಿಕನನ್ನಾಗಿ** ಗುರ್ತಿಸಿಕೊಳ್ಳಲು ಸಹಾಯಕವಾಗಿದೆ. **ಒಬ್ಬ ವ್ಯಕ್ತಿ**ಯ ನಡೆ-ನುಡಿ, ವೇಷ-ಭೂಷಣದಿಂದ **ಅವನನ್ನು ಸುಸಂಸ್ಕೃತ**ನು ಎಂದು ಗುರ್ತಿಸಿಕೊಳ್ಳಲು ಸಹಾಯಕವಾಗಿದೆ. ......ಇತ್ತೀಚೆಗೆ ಮೊಬೈಲ್‌ನ ಹೊರತಾದ **ಮಾನವನ** ಜೀವನ ನೀರಿಲ್ಲದ ಮೀನಿನಂತಾಗುವುದರಲ್ಲಿ ಸಂಶಯವಿಲ್ಲ. ಏಕೆಂದರೆ ಮೊಬೈಲ್‌ನಂತಹ ಸಂಪರ್ಕ ಮಾಧ್ಯಮದ ಒಡನಾಟವನ್ನು **ಮಾನವನು** ಅಷ್ಟರ ಮಟ್ಟಿಗೆ **ಇಳಿಸಿಕೊಂಡಿದ್ದಾನೆ.**

ಮಾಹಿತಿಗಾರ : ಎಂ. ಮಂಜುನಾಥ್. ವಯಸ್ಸು-೨೦

೩. ಮಾನವನು ವೈಜ್ಞಾನಿಕ ದೃಷ್ಟಿಯಲ್ಲಿ **ಮುಂದುವರಿಯುತ್ತಿದ್ದಾನೆ.** ಮರೆತು ತನ್ನ ಪ್ರಾಣವನ್ನು ಕಾಪಾಡಿಕೊಳ್ಳುವಲ್ಲಿ **ಅವನು ವಿಫಲನಾಗುತ್ತಿದ್ದಾನೆ.** ಪರಿಸರವನ್ನು **ಅವನು ಹಾಳುಮಾಡುತ್ತಿದ್ದಾನೆ. ಅವನು** ತಯಾರಿಸಿದ ವಸ್ತುಗಳ ತ್ಯಾಜ್ಯ ನೀರನ್ನು **ಅವನು** ನದಿಕಣಿವೆಗಳಿಗೆ ಬಿಡುವುದರಿಂದ ಪ್ರಾಣಿ ಸಂಕುಲದ ಮೇಲೆ ತುಂಬಾ ಪರಿಣಾಮ ಬೀರುತ್ತಿದೆ

ಮಾಹಿತಿಗಾರ್ತಿ : ಜಯಲಕ್ಷ್ಮಿ. ವಯಸ್ಸು-೪೦

೪. ಕಲಿಯುಗದ **ಮಾನವನು** ದಿನ ಕ್ರಮೇಣ ತನ್ನಬುದ್ಧಿಬಲದ ವಿಕಾಸದ ಕಾರಣ ಇಂದು **ಆಧುನಿಕ ಮಾನವ ಎನಿಸಿದ್ದಾನೆ.** ಶಿಲಾಯುಗದ ಜನರಿಗೆ ವಸ್ತುಗಳ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗಿಸುವುದು ಕಷ್ಟಕರವಾಗಿತ್ತು. ಹಾಗೂ ಮರಗಳಿಂದ ಚಕ್ರಗಳನ್ನು **ತಯಾರಿಸಿದನು.** ಹೀಗೆ ಮುಂದುವೆದಂತೆ ರಬ್ಬರ್‌ನಿಂದ ತಯಾರಿಸಲು ಹಲವಾರು ಕಂಪನಿಗಳನ್ನು **ತೆರೆಯತೊಡಿದನು.** ಕಾಡಿನಲ್ಲುಂಟಾದ ಆ ಕಸ್ಮಿಕ ಬೆಂಕಿಯಿಂದ ಅವನು ಬೆಂಕಿಯನ್ನು **ಕಂಡು ಹಿಡಿದನು.** ಹಾಗೂ ಆಹಾರವನ್ನು ಬೇಯಿಸಿ ತಿಂದರೆ ರುಚಿಕರವಾಗಿರುತ್ತದೆ ಎಂದು **ಅರಿತುಕೊಂಡನು.** ಮುಂದುವರಿಯುತ್ತಿದ್ದಂತೆ ನೀರಿನಿಂದ ವಿದ್ಯುತ್‌ನ್ನು ಕಂಡುಹಿಡಿದನು. ಹಾಗೂ ಕಲೆ, ವಾಣಿಜ್ಯ, ವಾಸ್ತುಶಿಲ್ಪ, ಸಾಹಿತ್ಯ ಸಂಸ್ಕೃತಿಯಲ್ಲಿ ಇನ್ನು ಹೆಚ್ಚಿನ ಪ್ರಗತಿಯನ್ನು ಕಾಣಲು **ಅವನಿಗೆ** ಸುಲಭವಾಗುವಂತೆ ಹಲವು ಸುಲಭ ಮಾರ್ಗಗಳಲ್ಲಿ **ಅವನು** ಮುಂದುವರಿಯ **ತೊಡಗಿದನು.** ಎಷ್ಟಾದರೂ ಜೀವ ಕೋಟಿಗಳಲ್ಲೆಲ್ಲಾ ಮಾನವನೇ ಅತಿ **ದೊಡ್ಡವನಲ್ಲವೆ.** ಅತಿ **ಬುದ್ಧಿವಂತ**ಅಲ್ಲವೇ!

ಮಾಹಿತಿಗಾರ : ಎಂ.ಸಿ. ನಾಗರಾಜು. ವಯಸ್ಸು-೪೦

೫. ಸಂಸ್ಕೃತಿ ಎಂಬುವುದು ಆ ದೇಶದ ಧಾರ್ಮಿಕತೆಯ ಬಗ್ಗೆ ಸಾರುತ್ತದೆ.ಇದು **ಹಿರಿಯರು** ಉಳಿಸಿಕೊಂಡು ಬಂದಿರುವಂತಹ ಅಪೂರ್ವ ವಾದ ಸಂಪತ್ತು.ನಮ್ಮ **ಪೂರ್ವಜ**ರಿಂದ ಸಂಸ್ಕೃತಿಯು ಬೆಳೆದು ಬಂದಿದೆ. ಆಗಿನ ಕಾಲದಲ್ಲಿ **ಸಂಪ್ರದಾಯ ಶರಣರು** ತಮ್ಮ ಆಚಾರಗಳು ವಿಧಿ ವಿಧಾನಗಳನ್ನು ಕಟ್ಟುನಿಟ್ಟಾಗಿ ಆಚರಿಸಿಕೊಂಡು ಬರುತ್ತಿದ್ದರು.

ಮಾಹಿತಿಗಾರ್ತಿ: ಸುಬ್ಬಮ್ಮ. ವಯಸ್ಸು : ೬೦+

೬. ಭರತ ಖಂಡದಲ್ಲಿಹಿಂದೂ, ಮುಸ್ಲಿಂ, ಪಾರ್ಸಿ, ಜೈನ, ಸಿಖ್, ಕ್ರೈಸ್ತ, ಮುಂತಾದ ಧರ್ಮದವರು ವಾಸಿಸುತ್ತಿದ್ದಾರೆ. ಇದಕ್ಕೆ ಕಾರಣ ನಮ್ಮಲ್ಲಿರುವ **ಸಹೋದರತೆಯ**

ಭಾವನೆ, ಗೌತಮ ಬುದ್ಧ, ಮಹಾವೀರ, ಶಂಕರ, ರಾಮಾನುಜ, ತೈಲಪ, ಹೊಯ್ಸಳ, ಬಸವಣ್ಣನವರು ಜನಿಸಿದ ನಾಡು ರಸಋಷಿಗಳ ಸಾಧುಸಂತರ ತವಸೂರು. ಶಿಲ್ಪಕಲೆಗಳ ನಾಡು. ಮಹಾನ್‌ಕವಿಗಳ ಬೀಡು ಭಾರತವಾಗಿದೆ.

ಮಾಹಿತಿಗಾರ : ದೇವರಾವ್. ವಯಸ್ಸು :೬೦+

ಮೇಲಿನ ಪ್ರತಿಯೊಂದು ಉದಾಹರಣೆಗಳಲ್ಲಿ ಸಮುದಾಯವನ್ನು ಕುರಿತು ಮಾತನಾಡುವಾಗ ಪುರುಷ ಪ್ರಾಧಾನ್ಯತೆಯಿಂದ ಕೂಡಿರುವ ಭಾಷೆಯ ಬಳಕೆಯನ್ನು ಗಮನಿಸಬಹುದು. ಉದಾಹರಣೆಗೆ ಒಂದು, ಎರಡು ಹಾಗೂ ಮೂರರಲ್ಲಿ ವ್ಯಕ್ತಗೊಂಡಿರುವಂತೆ ಪ್ರತಿಯೊಂದು ಬದಲಾವಣೆಗಳಿಗೂ ಅವನೇ ಕಾರಣಕರ್ತ, ಸಂಸ್ಕೃತಿ ಸಂರಕ್ಷಕನೂ ಅವನೇ, ಹೊಸ ವೈಜ್ಞಾನಿಕ ವಿಚಾರಗಳ ಆವಿಷ್ಕಾರಕನೂ ಅವನೇ ಆಗಿದ್ದಾನೆ. ಉದಾಹರಣೆ ನಾಲ್ಕರಲ್ಲಿ ವ್ಯಕ್ತಗೊಂಡಿರುವಂತೆ ಶಿಲಾಯುಗದ ಆದಿಮಾನವ ಆಧುನಿಕ ಮಾನವ ಎನಿಸಿಕೊಂಡವನೂ ಅವನೇ ಆಗಿದಾದನೆ. ಈ ಅಂಶಗಳನ್ನು ಇಲ್ಲಿ ಬಳಕೆಗೊಂಡಿರುವ ಮನುಷ್ಯ, ಕಾರಣಕರ್ತ, ನಾಗರೀಕ, ಸುಸಂಸ್ಕೃತ, ಆಧುನಿಕಮಾನವ ಬುದ್ಧಿವಂತ, ಹಿರಿಯ, ಪೂರ್ವಜ, ಸಂಪ್ರದಾಯ ಶರಣ, ಸಹೋದರ, ಕೃಷಿಕ, ಋಷಿ, ಸಾಧುಸಂತ, ಕವಿ ಮೊದಲಾದ ಪದಗಳು ಸ್ಪಷ್ಟಪಡಿಸುತ್ತವೆ. ಇವುಗಳಿಗೆ ಪರ್ಯಾಯವಾಗಿ ಮಾನುಷಿ, ಸುಸಂಸ್ಕೃತೆ, ಬುದ್ಧಿವಂತೆ, ಹಿರಿಯೆ, ಪೂರ್ವಜೆ, ಸಹೋದರಿ, ಕವಯತ್ರಿ ಮೊದಲಾದ ಸ್ತ್ರೀವಾಚಕ ಪದಗಳಿದ್ದರೂ ಕೂಡ ಅವುಗಳನ್ನು ಎಲ್ಲಿಯೂ ಯಾರೂ ಬಳಸಿಲ್ಲ.

ಯಾವುದೇ ವಿಚಾರದಲ್ಲಾಗಲಿ ಪುರುಷನಂತೆ ಸ್ತ್ರೀಯು ಸಮಾನವಾಗಿ ಕಾರಣಕರ್ತೆಯಳಾಗಿದ್ದರೂ ಕೂಡ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಅವನೇ ಅಗ್ರಗಣ್ಯನಾಗುತ್ತಾನೆ. ಮಹಿಳೆ ಅವನ ಅಧೀನ ನೆಲೆಯಲ್ಲಿ ಗುರುತಿಸಲ್ಪಡುತ್ತಾಳೆ ವಿನಃ ಅವಳಿಗೆ ಪ್ರತ್ಯೇಕ ಅಸ್ತಿತ್ವ ಉಂಟಾಗುವುದಿಲ್ಲ. ಉದಾಹರಣೆ ಆರರಲ್ಲಿ ಉಲ್ಲೇಖಗೊಂಡಿರುವ ಗೌತಮ ಬುದ್ಧ, ಮಹಾವೀರ, ಶಂಕರ, ರಾಮಾನುಜ, ತೈಲಪ, ಹೊಯ್ಸಳ, ಬಸವಣ್ಣನವರಂತೆ ಜಾನ್ಸಿ, ಚೆನ್ನಮ್ಮ, ಅಕ್ಕಮಹಾದೇವಿ, ಓಬವ್ವರಂತಹ ಚಾರಿತ್ರಿಕ ಪಾತ್ರಗಳ ಉದಾಹರಣೆಗಳಿದ್ದರೂ ಕೂಡ ಪುರುಷಪ್ರಧಾನ ಐಡಿಯಾಲಜಿಗಳಿಗೆ ಅವು ಮುಖ್ಯವಾಗುವುದಿಲ್ಲ.

**ವಯಕ್ತಿಕ ನೆಲೆ**

ಸಮುದಾಯದ ನೆಲೆಯಲ್ಲಿ ಮಹಿಳೆಯು ಪುರುಷವಾಚಕಗಳಿಂದಲೇ ಗುರುತಿಸಲ್ಪಡುತ್ತಿದ್ದಾಳೆ ಎಂಬುದು ಕೆಲವು ಉದಾಹರಣೆಗಳಿಂದ ಸ್ಪಷ್ಟವಾಯಿತು. ಆದರೆ ವಯಕ್ತಿಕ ನೆಲೆಯ ಭಾಷಾಬಳಕೆಯಲ್ಲಿ ಸ್ತ್ರೀವಾಚಕಗಳಿಂದ ಗುರುತಿಸಲ್ಪಡುತ್ತಿದ್ದಾಳೆ? ಅಥವಾ ಅಲ್ಲಿಯೂ ಪುರುಷವಾಚಕಗಳನ್ನೇ ಬಳಸುತ್ತಿದ್ದಾಳೆಯೇ? ಎಂಬುದನ್ನು ಗಮನಿಸಿದಲ್ಲಿ ಸ್ತ್ರೀ ಇಲ್ಲಿಯೂಕೂಡ ಪುರುಷವಾಚಕಗಳ ಮುಖಾಂತರವೇ ಗುರುತಿಸಲ್ಪಡುತ್ತಿದ್ದಾಳೆ. ಇದನ್ನು ಒಂದು ಉದಾಹರಣೆಯ ಮೂಲಕ ಸ್ಪಷ್ಟಪಡಿಸಿಕೊಳ್ಳುವುದಾದರೆ,

೭. ನಾನು ಉದ್ಯೋಗಕ್ಕೆ ಹೋದಾಗಿನಿಂದ ನನ್ನ ಬದುಕು ಹಿಂದಿಗಿಂತ ಇಂದು ಬದಲಾಗಿದೆ. ಸ್ತ್ರೀಯರು ಇಂದು ಎಲ್ಲಾ ಕ್ಷೇತ್ರಗಳಲ್ಲೂ ಕಾಣಿಸಿಕೊಳ್ಳುತ್ತಿದ್ದಾರೆ. **ವೈದ್ಯರು, ಶಿಕ್ಷಕರು, ಇಂಜಿನಿಯರುಗಳು, ಪ್ರಧಾನಮಂತ್ರಿ, ಮುಖ್ಯಮಂತ್ರಿ,** ಮುಂತಾದ ಸ್ಥಾನಗಳಿಗೇರಿ ಪುರುಷನಿಗೆ ಸರಿಸಮಾನಳಗಿದ್ದಾಳೆ. ಇದರಿಂದ ಅವಳು ಆರ್ಥಿಕ ಸ್ವಾವಲಂಬಿಭಯಾಗಿ **ಪೋಷಕರ-ಹಿರಿಯರ** ಅವಲಂಬಿತನದಿಂದ ಮುಕ್ತಳಾಗಿದ್ದಾಳೆ. ನಾನೂ ಕೂಡ ಶಿಕ್ಷಕ ವೃತ್ತಿಗೆ ಸೇರಿಕೊಂಡ ಮೇಲೆ ನನ್ನ ಗಂಡನ ಅವಲಂಬಿತನದಿಂದ ಸಂಪೂರ್ಣ ಮುಕ್ತಳಾಗಿದ್ದೇನೆ.

ಮಾಹಿತಿಗಾರ್ತಿ : ಲತಾಕೃಷ್ಣಮೂರ್ತಿ. ವಯಸ್ಸು ;೩೦

ಉದಾಹರಣೆ ೭ರಲ್ಲಿ ಮಾಹಿತಿಗಾರ್ತಿಯೂ ತನ್ನ ವೈಯಕ್ತಿಕ ಜೀವನದ ಉದಾಹರಣೆಯನ್ನು ನೀಡುವಾಗಲೂ ಕೂಡ ಸ್ತ್ರೀವಾಚಕಗಳನ್ನು ಬಳಸದೆ ಪುರುಷವಾಚಕಗಳನ್ನೇ ಬಳಸಿರುವುದು ಕಂಡುಬರುತ್ತದೆ. ಇಲ್ಲಿ ವೈದ್ಯ, ಶಿಕ್ಷಕ, ಮುಖ್ಯಮಂತ್ರಿ, ಪ್ರಧಾನಮಂತ್ರಿ, ರಾಷ್ಟ್ರಪತಿ ಮುಂತಾದ ಪುರುಷವಾಚಕ ಪದಗಳಿಗೆ ಬದಲಾಗಿ ವೈದ್ಯೆ, ಶಿಕ್ಷಕಿ, ಮುಖ್ಯಮಂತ್ರಿಣಿ, ಪ್ರಧಾನಮಂತ್ರಿಣಿ, ರಾಷ್ಟ್ರಪತ್ನಿ ಎಂಬ ಸ್ತ್ರೀವಾಚಕ ಪದಗಳನ್ನು ಬಳಸಬಹುದಾಗಿದ್ದರೂ ಕೂಡ ಬಳಸಿಲ್ಲ. ಒಟ್ಟಾರೆ ವೈಯಕ್ತಿಕ ನೆಲೆಯ ಭಾಷೆಬಳಕೆಯ ಸಂದರ್ಭದಲ್ಲೂ ಕೂಡ ಸ್ತ್ರೀ, ಪುರುಷವಾಚಕಗಳಿಂದಲೇ ಗುರುತಿಸಲ್ಪಡುತ್ತಿದ್ದಾಳೆ.

**ಭಾಷೆ ಪುರುಷ ಪ್ರಧಾನವಾದುದು - ಅರಿವು ಇದೆಯೇ ?**

ಭಾಷೆ ಪುರುಷ ಪ್ರಧಾನವಾದುದು ಎಂಬ ಅರಿವು ಸಮುದಾಯದ ಎಲ್ಲಾ ಸ್ತರದ ಜನರಲ್ಲಿಯೂ ಮೂಡಿದೆಯೇ ? ಎಂಬ ಅಂಶವನ್ನು ಪರಿಗಣಿಸುವುದಾದರೆ ಕನ್ನಡ ಭಾಷೆಯ ಸಂದರ್ಭದಲ್ಲಿಯಂತೂ ಈ ಪರಿಜ್ಞಾನ ಎಲ್ಲರಲ್ಲಿಯೂ ಮೂಡಿಲ್ಲವೆಂದೇ ಹೇಳಬಹುದು. ಸಂಗ್ರಹಿಸಿದ ಮಾಹಿತಿಯಲ್ಲಿ ಎಲ್ಲಿಯೂ ಭಾಷೆ, ಪುರುಷ ಪ್ರಧಾನವಾದದ್ದು ಎಂಬುದರ ಅರಿವೂ ಯಾರೊಬ್ಬರಲ್ಲಿಯೂ ಇರುವಂತೆ ಕಂಡುಬರಲಿಲ್ಲ.

ಇಂದು ಸ್ತ್ರೀವಾಚಕಗಳ ಸೃಷ್ಟಿಕ್ರಿಯೆ ಮತ್ತು ಬಳಕೆ ಕೇವಲ ಒಂದು ಪ್ರಜ್ಞಾವಂತ ಸ್ತ್ರೀವಾದಿಗಳ ವಲಯದಲ್ಲಿ ಮಾತ್ರ ನಡೆಯುತ್ತಿದೆ. ಇದನ್ನು ಒಂದು ಉದಾಹರಣೆಯ ಮೂಲಕ ಸ್ಪಷ್ಟಪಡಿಸಿಕೊಳ್ಳುವುದಾದರೆ,

೮. **ಬರಹಗಾರ್ತಿಯೂ** ಪೂರ್ಣವಾಗಿ ಲಿಂಗವ್ಯವಸ್ಥೆಯಾಧಾರಿತ ಅನುಭವಗಳನ್ನು ದಾಟಿ, ಮೀರಿ ಸ್ವಾಯತ್ತವಾಗಿಬರೆಯುವುದು ಕಷ್ಟಎನ್ನುವುದು ಅರಿವಿಗೆ ಬಂದಂತಹ ವಿಷಯ.........ಲಿಂಗವ್ಯವಸ್ಥೆ ಪಾತ್ರತೆಯ ಸಂಹಿತೆಯಿಂದ ಹೊರಬೀಳುವ ವ್ಯಕ್ತಿಯೂ ತನ್ನ ಸಂಗಾತಿ ಪೂರ್ವಸ್ಥಾಪಿತ ಸ್ತ್ರೀಯಾತ್ಮಕ ಹಾಗೂ ಪುರುಷಾತ್ಮಕ ವ್ಯವಸ್ಥೆಯನ್ನು **ಅಭದ್ರಗೊಳಿಸುತ್ತಾನೆ/ಳೆ.** ..........**ವಕೀಲಿಯೂ,** ಸ್ತ್ರೀವಾದಿ **ಚಿಂತಕಿಯೂ** ಆದ ಕ್ಯಾಥರಿನ್‌ಮಾಕಿನ್‌ಳು............[೧]

ಉದಾಹರಣೆಗೆ ೮ರ ಪ್ರೀತಿ ಶುಭಚಂದ್ರವರ ಬರಹದಲ್ಲಿ ವಕೀಲಿ, ಬರಹಗಾರ್ತಿ, ಚಿಂತಕಿ ಎಂಬ ಸ್ತ್ರೀವಾಚಕಗಳ ಪ್ರಜ್ಞಾಪೂರ್ವಕ ಬಳಕೆಯನ್ನು ಗಮನಿಸಬಹುದು. ಅಲ್ಲದೆ ವಿಚಾರಗಳು ಸ್ತ್ರೀ-ಪುರುಷ ಇಬ್ಬರಿಗೂ ಸಮಾನವಾಗಿ ಅನ್ವಯವಾಗುವಂಥವುಗಳು ಎಂಬುದನ್ನು ಗುರುತಿಸಲು ಅಭದ್ರಗೊಳಿಸುತ್ತಾನೆ /ಳೆ ಎಂದು ಗೆರೆ ಎಳೆದು ಬಳಸುವ ರೀತಿಯನ್ನು ಕೂಡ ಗಮನಿಸಬಹುದು.

ಒಟ್ಟಾರೆ ಇಂದು ಸ್ತ್ರೀವಾಚಕಗಳ ಸೃಷ್ಟಿಕ್ರಿಯೆ ಮತ್ತು ಬಳಕೆ ಕೇವಲ ಒಂದು ಪ್ರಜ್ಞಾವಂತ/ವಂತೆಯರ ವಲಯದಲ್ಲಿ ಮಾತ್ರ ನಡೆಯುತ್ತಿದೆ ವಿನಃ ಅದು ಆ ಇಡೀ ಸಮುದಾಯದ ಸಾಂಸ್ಕೃತಿಕ ಭಾಗವಾಗಿ ಬಳಕೆಗೊಳ್ಳುವಷ್ಟು ಇನ್ನೂ ಪರಿಣಾಮಕಾರಿ

ಯಾಗಿಲ್ಲ ಎಂದು ಹೇಳಬಹುದು. ಗ್ರಾಮೀಣ ಪ್ರದೇಶದಲ್ಲಿ ಬಳಕೆಗೊಳ್ಳುತ್ತಿರುವ ಭಾಷೆಯಲ್ಲಿ ಸ್ತ್ರೀಯರಿಗೆ ಪ್ರತ್ಯೇಕ ಅಸ್ಥಿತ್ವವಿಲ್ಲದೇ ಇರುವಾಗ ಸ್ತ್ರೀವಾಚಕಗಳ ಬಳಕೆಯ ಕಲ್ಪನೆ ಕೂಡ ಅವರಲಿಲ್ಲ ಎಂದು ಹೇಳಬಹುದು.

ಸ್ತ್ರೀವಾಚಕಗಳ ಸೃಷ್ಟಿಕ್ರಿಯೆ ಮಾತ್ರ ನಡೆದರೆ ಸಾಲದು. ಮೊದಲು ಭಾಷೆ ಪುರುಷ ಪ್ರಧಾನವಾದುದು ಎಂಬ ಅರಿವನ್ನು ಆ ಇಡೀ ಸಮುದಾಯದ ಎಲ್ಲಾ ಸ್ತರದ ಜನರಲ್ಲಿಯೂ ಮೂಡಿಸಬೇಕು. ಅಲ್ಲಿಯ ತನಕ ಈ ಸ್ತ್ರೀವಾಚಕಗಳ ಸೃಷ್ಟಿಕ್ರಿಯೆ ಬಳಕೆಯ ನೆಲೆಯಲ್ಲಿ ಸಫಲವಾಗದು.

ಅಡಿಟಿಪ್ಪಣಿ

೧. ಡಾ. ಪ್ರೀತಿಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ೨೦೦೨, ಪು. ೧೫೨-೧೫೭

# ಸಮಾರೋಪ

'ಹೆಣ್ಣಿನ ಭಾಷೆ ಮತ್ತು ಸಾಮಾಜಿಕತೆ' ಎಂಬ ವಿಷಯವನ್ನು ಕೆಲವು ಪ್ರಶ್ನೆಗಳನ್ನಿಟ್ಟುಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿತ್ತು. ಆ ಪ್ರಶ್ನೆಗಳಿಗೆ ಉತ್ತರ ದೊರಕಿದೆಯೇ ಇಲ್ಲವೇ ಎಂಬುದನ್ನು ಒಟ್ಟಾರೆ ಅಧ್ಯಯನದ ಗ್ರಹಿಕೆಯಿಂದ ನೋಡುವುದಾದರೆ,

ಮೂಲತಃ ಭಾಷೆಯ ಸಂರಚಿತ ರೂಪ ಗಂಡು/ಹೆಣ್ಣು ಎಂಬ ತಾರತಮ್ಯದಿಂದ ರಚಿತವಾದದ್ದಲ್ಲ. ಆ ಸಮುದಾಯದ ಅಧಿಕಾರ ರೂಢ ವರ್ಗದ ಸುಪ್ತ ಚೇತನಗಳು ಸಂಜ್ಞೆಗಳಾಗಿ ಭಾಷೆಯಲ್ಲಿ ಅಂತಸ್ಥಗೊಂಡು ಈ ರೀತಿಯ ವಿಭಜಿತ ನೆಲೆಗೆ ಬಂದು ನಿಂತಿವೆ. ಭಾಷೆಯಲ್ಲಿ 'ಗಂಡುಭಾಷೆ' 'ಹೆಣ್ಣುಭಾಷೆ' ಎಂಬ ಎರಡು ವಿಧಗಳಿಲ್ಲ, ಎರಡು ಭಿನ್ನ ದೃಷ್ಟಿಕೋನಗಳಿವೆ ಅಷ್ಟೆ. ಈ ಭಿನ್ನ ದೃಷ್ಟಿಕೋನಗಳು ಇಬ್ಬರಲ್ಲೂ ಇರವಂತಹುಗಳು ಹಾಗೂ ಇಬ್ಬರಿಗೂ ಅನ್ವಯವಾಗುವಂಥವುಗಳು. ಆದರೆ ಪುರುಷ ಪ್ರಧಾನ ತಾತ್ವಿಕತೆ ಅವುಗಳನ್ನು ತನ್ನ ಹಿತಾಸಕ್ತಿಗನುಗುಣವಾಗಿ ಸಂರಚಿಸಿಕೊಂಡಿದೆ.

ಭಾಷೆ ಒಳಗೊಂಡಿರುವ ಈ ಪುರುಷ ಪ್ರಾಧಾನ್ಯತೆಗೆ ವಿರುದ್ಧವಾಗಿಹೆಣ್ಣು ತನ್ನ ಅಸ್ಥಿತ್ವವನ್ನು ಭಾಷೆಯಲ್ಲಿ ಸ್ಥಾಪಿಸಿಕೊಳ್ಳಲು, ಮಹಿಳೆಯಿರದೇ ಆದ ಹೊಸಭಾಷೆಯನ್ನು ಸೃಷ್ಟಿಸಿಕೊಳ್ಳಲು ಪ್ರಯತ್ನಿಸಿದರೂ ಕೂಡ ಇನ್ನೂ ಸಾಧ್ಯವಾಗಿಲ್ಲ. ಏಕೆಂದರೆ ಅನೇಕ ಶತಮಾನಗಳಿಂದ ಸ್ಥಾಪಿತವಾದ ಪುರುಷ ಪ್ರಧಾನ ಭಾಷೆಯನ್ನು ಏಕಾಏಕಿ ಬುಡಮೇಲು ಮಾಡಿ ಅದೇ ಸ್ಥಳದಲ್ಲಿ ಹೊಸ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗುವುದಿಲ್ಲ. ಬದಲಿಗೆ ಪುರುಷ ವಾಚಕಗಳ ಮುಖಾಂತರವೇ ಗುರುತಿಸಲ್ಪಡುತ್ತಿದ್ದವಳು ಅದಕ್ಕೆಬದಲಾಗಿ ಸ್ತ್ರೀವಾಚಕಗಳನ್ನು ಸೃಷ್ಟಿಸಿಕೊಳ್ಳುವಲ್ಲಿ ಅವಳ ಯಶಸ್ಸನ್ನು ಗುರುತಿಸಬಹುದು ಅಷ್ಟೇ.

ನಮ್ಮ ಪ್ರತಿಯೊಂದು ಗ್ರಹಿಕೆ, ಆಲೋಚನೆಗಳು ನಡೆಯುವುದೇ ನಮ್ಮ ದೇಹದ ಮುಖಾಂತರ, ಸ್ತ್ರೀಯೂ ಅಲ್ಲದ, ಪುರುಷನೂ ಅಲ್ಲದ ತಟಸ್ಥ ಸ್ಥಿತಿ ಅಸಾಧ್ಯ. ಆಗ ಲಿಂಗಾತೀತವಾದ ಭಾಷೆಯ ಸೃಷ್ಟಿಕೂಡ ಸಾಧ್ಯವಾಗುವುದಿಲ್ಲ. ಸ್ತ್ರೀ-ಪುರುಷ ಎಂಬ

ಗ್ರಹಿಕೆಯನ್ನು ಬಿಟ್ಟು ಆಲೋಚಿಸುವವರೆಗೆ ಈ ಲಿಂಗಾತೀತವಾದ ಕಲ್ಪನೆ ಭಾಷೆಯನ್ನು ಒಳಗೊಂಡಂತೆ ಯಾವುದೇ ವಿಷಯದಲ್ಲೂ ಜಾರಿಗೆ ಬರುವುದಿಲ್ಲ. ಅದರಲ್ಲೂ ಕನ್ನಡ ಭಾಷೆಯ ಸಂದರ್ಭದಲ್ಲಿಯಂತು ಲಿಂಗಾತೀತವಾದ ಭಾಷಿಕ ರಚನೆ ಇನ್ನೂ ಸಾಧ್ಯವಾಗಿಲ್ಲ.

ಒಂದು ವೇಳೆ ಲಿಂಗಾತೀತವಾದ ಭಾಷಿಕ ರಚನೆ ಸೃಷ್ಟಿಯಾದರೂ ಕೂಡ ಆ ಪದಗಳ ಅರ್ಥಗಳು ಪುನಃ ಗಂಡು/ಹೆಣ್ಣು ಎಂಬ ತಾರತಮ್ಯ ಭಾವವನ್ನು ಬೆಸೆದು ಕೊಂಡೇ ರೂಢಿಗೆ ಬರುತ್ತವೆ. ಇದಕ್ಕೆ ಹಿಂದೆ ಅಧ್ಯಾಯ ಒಂದರಲ್ಲಿ ಚರ್ಚಿಸಲಾದ ಚೇರ್‌ಪರ್ಸನಪ್ಪ, ಚೇರ್‌ಪರ್ಸನಮ್ಮ ಎಂಬ ಉದಾಹರಣೆಗಳನ್ನು ಗಮನಿಸಬಹುದು. ಭಾಷೆಯ ಅಮೂರ್ತ ಕಲ್ಪನೆಯಲ್ಲಿರುವ ತರತಮಭಾವ ನಾಶವಾಗುವವರೆಗೂ ವಾಸ್ತವದಲ್ಲಿ ಲಿಂಗ ಸಮಾನತೆ ಸಾಕಾರಗೊಳ್ಳುವುದಿಲ್ಲ. ಮೊದಲು ಸ್ತ್ರೀ -ಪುರುಷರ ಸಮಾನತೆಯ ಕಲ್ಪನೆ ಆ ಭಾಷೆಯ ಅಮೂರ್ತ ಗ್ರಹಿಕೆಯಲ್ಲಿ ಮೂಡಬೇಕು. ಆಗ ಮಾತ್ರ ವಾಸ್ತವದಲ್ಲಿ ಸಮಾನತೆ ಸಾಧ್ಯವಾಗುತ್ತದೆ.

ಹೆಣ್ಣಿನ ಆಲೋಚನೆ, ಲೋಕಗ್ರಹಿಕೆ ಮತ್ತು ತಾತ್ವಿಕತೆ ಗಂಡಿಗಿಂತ ಯಾವತ್ತು ಕೀಳಲ್ಲ. ಏಕೆಂದರೆ ಹಿಂದೆ ಅವರನ್ನಿರಿಸಿದ ಲೋಕಗಳಿಗೆ ಅನುಗುಣವಾಗಿ ಅವರ ಆಲೋಚನಾ ಕ್ರಮಗಳು ರೂಪುಗೊಳ್ಳುತ್ತಿದ್ದವು. ಪ್ರಸ್ತುತ ಬದಲಾದ ಸಾಮಾಜಿಕ ಸಂದರ್ಭದಲ್ಲಿ ಪುರುಷನಿಗೆ ಸರಿಸಮಾನವಾಗಿ ಸ್ತ್ರೀ ತಾರ್ಕಿಕಳಾಗಬಲ್ಲಳು. ಯಾವುದೇ ಜ್ಞಾನವಲಯಗಳಿಗೆ ಸ್ತ್ರೀ- ಪುರುಷ ಎಂಬ ಭೇದ ಭಾವವಿಲ್ಲ.ಇಬ್ಬರಿಗೂ ಸಮಾನ ಅವಕಾಶಗಳು ದೊರೆತಾಗ ಇಬ್ಬರ ಜ್ಞಾನವಲಯ, ತಾತ್ವಿಕ ದೃಷ್ಟಿಕೋನ ವಿಕಾಸವಾಗುತ್ತವೆ.

ಸಾಹಿತ್ಯ ಕೃತಿಗಳಲ್ಲಿಕೂಡ ಹೆಣ್ಣು ಅವಳ ಸ್ವಂತ ಅಭಿವೃದ್ಧಿಗೆ ಸ್ವಂತ ಭಾಷೆಯನ್ನು ರೂಪಿಸಿಕೊಳ್ಳುವಲ್ಲಿ ಎಲ್ಲಾ ಮಹಿಳಾ ಬರಹಗಾರ್ತಿಯರು ಸಂಪೂರ್ಣ ಯಶಸ್ವಿಯಾಗಿಲ್ಲ. ವೀಣಾಶಾಂತೇಶ್ವರ ರಂತಹ ಬರಹಗಾರ್ತಿಯರು ಮಾತ್ರ ಭಾಷೆಯೊಳಗಿನ ಸ್ಥಾಪಿತ ಅರ್ಥಗ್ರಹಿಕೆಯನ್ನು ವಿಸ್ತರಿಸಿಕೊಂಡು ಪುರುಷನಿಗೆಂದೇ ಮೀಸಲಾದ ವಿಚಾರಗಳನ್ನು ಸ್ತ್ರೀಯೂ ಕೂಡ ತನ್ನದಾಗಿಸಿಕೊಳ್ಳುವಿಕೆಯಲ್ಲಿ ಯಶಸ್ವಿಯಾಗಿದ್ದಾರೆ.

ಭಾಷೆ ಒಳಗೊಂಡಿರುವ ಸ್ತ್ರೀತ್ವ ಹಾಗೂ ಪುರುಷತ್ವದ ಸಾಂಸ್ಕೃತಿಕ ಬಂಧನಗಳ ಮಿತಿಗಳನ್ನು ಸೃಜನಶೀಲ ನೆಲೆಯಲ್ಲಿ ಮೀರುವಿಕೆ ಹಾಗೂ ಮಾನವರ ಸಮಗ್ರತೆಯ

ಪರಿಕಲ್ಪನೆ ಸ್ತ್ರೀ-ಪುರುಷ ಸಾಹಿತಿಗಳಿಬ್ಬರಲ್ಲೂ ಸಾಧ್ಯವಾಗಿಲ್ಲ. ಅಪ್ರಜ್ಞಾಪೂರ್ವಕವಾಗಿ ಏಕತೆಯ ಭಾವನೆಯನ್ನು ಸಾಧಿಸಲು ಸಾಧ್ಯವಾಗಿರುವುದು ಪುರುಷ ಬರಹಗಾರರಿಗೆ ಮಾತ್ರ. ಏಕೆಂದರೆ ಸ್ತ್ರೀಯೂ ಈಗಷ್ಟೇ ತನ್ನ ಅಸ್ಥಿತ್ವವನ್ನು ಗುರುತಿಸಿಕೊಳ್ಳುತ್ತಿದ್ದಾಳೆ. ಹಾಗೂ ತನ್ನ ಹೆಣ್ಣು ದೇಹದ ಮುಖಾಂತರವೇ ತನ್ನ ಅಸ್ಥಿತ್ವವನ್ನು ಕಾಯ್ದುಕೊಳ್ಳುವಾಗ ಅವಳಿಗೆ ಭಾಷೆಯಲ್ಲಿನ ಈ ಎಲ್ಲಾ ಸಾಂಸ್ಕೃತಿಕ ಬಂಧನಗಳ ಮಿತಿಯನ್ನು ಮೀರಲು ಇನ್ನೂ ಸಾಧ್ಯವಾಗಿಲ್ಲ.

ಇಂದು ಮಹಿಳೆಯೂ ಪುರುಷ ವಾಚಕಗಳಿಗೆ ಬದಲಾಗಿ ಸ್ತ್ರೀವಾಚಕಗಳನ್ನು ಸೃಷ್ಟಿಸಿಕೊಂಡರೂ ಕೂಡ ಈ ಸೃಷ್ಟಿಕ್ರಿಯೆ ಒಂದು ಪ್ರಜ್ಞಾವಂತ ವಲಯದಲ್ಲಿ ಮಾತ್ರ ನಡೆಯುತ್ತಿದೆ. ಆ ಸಂಸ್ಕೃತಿಯ ಸಾಂಸ್ಕೃತಿಕ ಭಾಗವಾಗಿ ಎಲ್ಲಾ ಸ್ತರದ ಜನರಲ್ಲೂ ಬಳಕೆಗೊಳ್ಳುತ್ತಿಲ್ಲ. ಅಲ್ಲದೆ, ಭಾಷೆ ಪುರುಷ ಪ್ರಾಧಾನ್ಯತೆಯಿಂದ ಕೂಡಿದೆ ಎಂಬ ಗ್ರಹಿಕೆ ಕೂಡ ಇನ್ನೂ ಎಲ್ಲರಲ್ಲಿಯೂ ಮೂಡಿಲ್ಲ. ಇತ್ತೀಚೆಗಷ್ಟೇ ಸ್ತ್ರೀವಾಚಕಗಳ ಸೃಷ್ಟಿಕ್ರಿಯೆ ನಡೆಯುತ್ತಿರುವುದರಿಂದ ಅವುಗಳ ಬಳಕೆ ಇಡೀ ಸಮುದಾಯದ ಎಲ್ಲಾ ಸ್ತರದ ಜನರಲ್ಲೂ ನಡೆಯಬೇಕಾದರೆ ಇನ್ನೂ ಅನೇಕ ದಶಕಗಳೇ ಬೇಕಾಗಬಹುದು. ಸದ್ಯಕ್ಕಂತೂ ಸ್ತ್ರೀವಾಚಕಗಳ ಕ್ರಮಬದ್ಧ ಬಳಕೆ ಎಲ್ಲರಲ್ಲಿಯೂ ಸಾಧ್ಯವಾಗಿಲ್ಲ.

ಒಟ್ಟಾರೆ ಸಂಸ್ಕೃತಿಯ ವಿಭಿನ್ನ ಗುಣಗಳ ಪಟ್ಟಿಗಳಲ್ಲಿ ಸ್ತ್ರೀ ಪುರುಷರ ಸ್ವಭಾವಗಳನ್ನು ವಿಂಗಡಿಸುವುದು ನಿಜಸ್ಥಿತಿಗೆ ವಿರುದ್ಧವಾದ ಪ್ರಕ್ರಿಯೆ. ಮೊದಲು ಈ ವಿಂಗಡಣೆಯ ದೃಷ್ಟಿಕೋನವನ್ನು ಮೀರಬೇಕು. ಸಮಾನತೆ ಎಂಬುದೇ ಒಂದು ಆದರ್ಶ. ಅದೊಂದು ನಿರಂತರ ಪ್ರಕ್ರಿಯೆ. ಸ್ತ್ರೀ-ಪುರುಷ ಇಬ್ಬರೂ ಈ ಸಮಾನತೆಯ ಕಲ್ಪನೆಗೆ ಮುಂದಾಗಬೇಕು. ಆಗ ಮಾತ್ರ ಭಾಷೆಯನ್ನು ಒಳಗೊಂಡಂತೆ ಎಲ್ಲಾ ಕ್ಷೇತ್ರಗಳಲ್ಲೂ ಲಿಂಗ ಸಮಾನತೆ ಸಾಧ್ಯವಾಗುತ್ತದೆ.

## ಪರಾಮರ್ಶನ ಗ್ರಂಥಗಳು


| | | | |
|---|---|---|---|
| ೧. | ಭಾಷೆ<br>ಕನ್ನಡ ವಿಶ್ವವಿದ್ಯಾಲಯ | : | ಡಾ. ಕೆ.ವಿ. ನಾರಾಯಣ್ (ಸಂ.)<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,<br>ಹಂಪಿ, ೨೦೦೭. |
| ೨. | ಹೆಣ್ಣು ಮತ್ತು ಭಾಷೆ | : | ಡಾ. ಹೆಚ್.ಎಸ್. ಶ್ರೀಮತಿ (ಸಂ.)<br>ಮಹಿಳಾ ಅಧಯಯನ ಕೇಂದ್ರ,<br>ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭. |
| ೩. | ಸ್ತ್ರೀವಾದ | : | ಡಾ. ಬಿ.ಎನ್. ಸುಮಿತ್ರಾಬಾಯಿ<br>ಕರ್ನಾಟಕ ಸಾಹಿತ್ಯ ಅಕಾಡೆಮಿ,<br>ಕನ್ನಡ ಭವನ, ಜೆ.ಸಿ.ರಸ್ತೆ,<br>ಬೆಂಗಳೂರು, ೨೦೦೬. |
| ೪. | ದ ಸೆಕೆಂಡ್ ಸೆಕ್ಸ್ | : | ಸಿಮೊನ್ ದ ಬೋವಾ,<br>ಡಾ. ಹೆಚ್.ಎಸ್. ಶ್ರೀಮತಿ (ಅನು),<br>ಕಾವ್ಯಮಂಡಲ, ೨೦೦೬. |
| ೫. | ಸಾಹಿತ್ಯ ವಿಮರ್ಶೆ | : | ಡಾ. ಸಿ.ಎನ್. ರಾಮಚಂದ್ರನ್,<br>ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ,<br>ಜೆ.ಸಿ.ರಸ್ತೆ, ಬೆಂಗಳೂರು, ೨೦೦೮. |
| ೬. | ಮಹಿಳಾ ಅಧ್ಯಯನದ<br>ತಾತ್ವಿಕ ನೆಲೆಗಳು ಮತ್ತು<br>ಮಹಿಳಾ ಚಳುವಳಿಗಳು | : | ಡಾ. ಪ್ರೀತಿಶುಭಚಂದ್ರ,<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,<br>ಹಂಪಿ, ೨೦೦೨. |
| ೭. | ಸ್ತ್ರೀಕಥನ | : | ಡಾ. ಶೈಲಜ ಹಿರೇಮಠ,<br>ಭಾವನ ಪ್ರಕಾಶನ, ಹೊಸಪೇಟೆ, ೨೦೦೩. |
| ೮. | ಮಹಿಳಾ ಸಂಕಥನ | : | ಡಾ. ಗಾಯತ್ರಿ ನಾವಡ,<br>ಕನ್ನಡ ಪುಸ್ತಕ ಪ್ರಾಧಿಕಾರ,<br>ಚಾಮರಾಜಪೇಟೆ, ೨೦೦೩. |
| ೯. | ಸಾಹಿತ ಕಥನ | : | ಡಿ.ಆರ್. ನಾಗರಾಜ್, ಅಕ್ಷರ ಪ್ರಕಾಶನ,<br>ಸಾಗರ, ೧೯೯೬. |
| ೧೦. | ಮಹಿಳೆ ಸಮಾಜ<br>ಮತ್ತು ಸಂಸ್ಕೃತಿ | : | ಡಾ. ಆರ್. ಇಂದಿರಾ<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,<br>ಹಂಪಿ, ೨೦೦೨. |

೧೧. ವಿಮರ್ಶೆಯ ಪರಿಭಾಷೆ : ಓ.ಎಲ್. ನಾಗಭೂಷಣ್, ಅಂಕಿತ ಪ್ರಕಾಶನ, ೧೯೯೮.

೧೨. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ : ಬರಗೂರು ರಾಮಚಂದ್ರಪ್ಪ (ಸಂ.) ಕರ್ನಾಟಕ ಸಾಹಿತ್ಯ ಅಕಾಡೆಮಿ ಕನ್ನಡ ಭವನ, ೨೦೦೬.

೧೩. ಇದು ಮಾನುಷಿಯ ಓದು : ಮಹೇಶ್ವರಿ. ಯು ರಾಜೇಶ್ ಪವರ್ ಪ್ರೆಸ್ ಪುತ್ತೂರು ದಕ್ಷಿಣ ಕನ್ನಡ ೨೦೦೧

೧೪. ಸುವರ್ಣ ಸಾಹಿತ್ಯ ವಿಮರ್ಶೆ : ಹೆಚ್.ದಂಡಪ್ಪ, ಬಿ.ಎನ್. ಸುಮಿತ್ರಾಬಾಯಿ (ಸಂ.) ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ೨೦೦೬

೧೫. ಶತಮಾನದ ಸಾಹಿತ್ಯ ವಿಮರ್ಶೆ: ಎಚ್.ಎಸ್. ರಾಘವೇಂದ್ರರಾವ್ (ಸಂ.) ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ೨೦೦೧.

೧೬. ತ್ರಿವೇಣಿಯವರ ಕಾದಂಬರಿಗಳು ಮರು ಓದು : ಡಾ.ಎಚ್.ಹೆಸ್. ಶ್ರೀಮತಿ, ತ್ರಿವೇಣಿ ಪಬ್ಲಿಕೇಷನ್ಸ್, ಚಾಮರಾಜಪುರಂ, ಮೈಸೂರು, ೧೯೯೯.

೧೭. A Literature of Their own : Elaine Showalter Princeton University Press, New Jersey, 1999.

೧೮. Desire in Language : Julia Kristeva, Edited by LeanS. Roudiez Columbia University Press, New York,1977

೧೯. .Beginning Theory an introduction to literary and cultural theory : Peter Barry Manchester University Press, 2007

## ಮೂಲ ಆಕರಗಳು


೧. ನಡೆದದ್ದೇ ದಾರಿ : ವೀಣಾಶಾಂತೇಶ್ವರ
(ಸಮಗ್ರ ಕಥನ ಸಾಹಿತ್ಯ) ಸುಂದರ ಪುಸ್ತಕ
ಪ್ರಕಾಶನ, ಧಾರವಾಡ, ೨೦೦೬.

೨. ದೇವನೂರಮಹಾದೇವರ ಕೃತಿಗಳು : ದೇವನೂರ ಮಹಾದೇವ
(ಸಮಗ್ರ ಕತೆ, ಕಾದಂಬರಿಗಳು)ಕ್ಯಾಪರ್
ಎಫೆಕ್ಟ್, ಬಸವನಗುಡಿ, ೧೯೯೭

೩. ಮಲೆಗಳಲ್ಲಿ ಮದುಮಗಳು : ಕುವೆಂಪು
ಉದಯರವಿ ಪ್ರಕಾಶನ, ಮೈಸೂರು,
೨೦೦೧.

೪. ಕಾನೂರು ಹಗ್ಗಡತಿ : ಕುವೆಂಪು
ಉದಯರವಿ ಪ್ರಕಾಶನ,
ವಾಣಿವಿಲಾಸಪುರಂ, ಮೈಸೂರು, ೧೯೯೭

೫. ಶಿವರಾಮ ಕಾರಂತರ ಸಾಹಿತ್ಯ ಶ್ರೇಣಿ : ಶಿವರಾಮ ಕಾರಂತ
ಬಿ. ಮಾಲಿನಿಮಲ್ಯ (ಸಂ.)
ಸಂಪುಟ-೧೬, ಕನ್ನಡ ಮತ್ತು ಸಂಸ್ಕೃತಿ
ನಿರ್ದೇಶನಾಲಯ, ೨೦೦೩

೬. ಸಂಸ್ಕಾರ : ಯು.ಆರ್.ಅನಂತಮೂರ್ತಿ,ಕನ್ನಡ ಮತ್ತು
ಸಂಸ್ಕೃತಿ ಇಲಾಖೆ, ಕನ್ನಡಭವನ, ೨೦೦೬

೭. ಕಂಬನಿ ಮತ್ತು ಚಿಗುರು : ಕೊಡಗಿನ ಗೌರಮ್ಮ,
ಸಣ್ಣ ಕತೆಗಳ ಸಂಕಲನ, ಕನ್ನಡ ಮತ್ತು
ಸಂಸ್ಕೃತಿ ನಿರ್ದೇಶನಾಲಯ, ೧೯೮೫.

೮. ಆಧುನಿಕ ಕನ್ನಡ ಕವನಗಳು : ಡಾ. ಎಂ.ಎ.ಜಯಚಂದ್ರ
ಡಾ. ಶಾಂತಲಕ್ಷ್ಮಿ
ಡಾ. ಶಶಿಕಲಾ ವೀರಯ್ಯಸ್ವಾಮಿ (ಸಂ.)
ಕನ್ನಡ ಸಾಹಿತ ಪರಿಷತ್ತು, ೨೦೦೬.

೯. ಭಾರತೀಪುರ : ಯು.ಆರ್. ಅನಂತಮೂರ್ತಿ
ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ),
೧೯೭೩

೧೦. ಹೂವು-ಹಣ್ಣು : ತ್ರಿವೇಣಿ, ರವಿಪ್ರಕಾಶನ, ಚಾಮರಾಜಪುರಂ,
ಮೈಸೂರು, ೨೦೦೨

೧೧. ಅವಳ ಕಥೆಗಳು : ಜಿ.ಎಸ್. ಅಮೂರ (ಸಂ.)
ಪ್ರಿಸಂ ಬುಕ್ಸ್ ಪ್ರೈ.ಲಿ. ಜಯನಗರ

೧೨. ತಾವರೆಯ ಕೊಳ : ತ್ರಿವೇಣಿ,
ಸಾಯಿಗೀತ ಪ್ರಕಾಶನ, ಚಾಮರಾಜಪುರಂ
ಮೈಸೂರು, ೧೯೯೭.

